ಕನ್ನಡ ಕಾವ್ಯಮಾಲೆ—೫೫

# ಪಕ್ಷಿಗಾನ

ಆನಂದ



ಪ್ರಕಾಶಕರು

ಕಾವ್ಯಾಲಯ

ಮೈಸೂರು

ಮೊದಲನೆಯ ಮುದ್ರಣ—೧೯೪೭



**ಬೆಲೆ : ರೂ. ೧–೪–೧**

ಮುದ್ರಕರು :

ಜಿ. ಎಚ್. ರಾಮರಾವ್ ಬಿ. ಎಸ್‌ಸಿ.

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

# ನೆನಪಿಗೆ

ಹನ್ನೆರಡು ವರುಷಗಳ ಹಿಂದೊಂದು ದಿನ ಸಂಜೆಯಲಿ,
ಮೂಡುತಿರೆ ತಾರೆಗಳು ಕೃತ್ತಿಕೋತ್ಸವಕೆಳಸಿ ನೀಲಿಮಾಗಗನದಲಿ,
ಮಾಯವಾಯ್ತು—

—ಎಮ್ಮ ಬಾಳಬಾಂದಳದಿ ಮೂಡಿದ್ದ ಮೂರು ವರುಷದ
ಕಿರುತಾರೆಯೊಂದು,
ಬಾಡಿ ಹೋಯ್ತು—

—ಎಮ್ಮೊಲವ ಮಲ್ಲಿಕಾಲತೆಯ ಎಳೆಯ ಮುದ್ದು
ಮುಗುಳೊಂದು.

ಆ ಮಲ್ಲಿಕಾಕುಟ್ಮಲ ಸಮ ಶಿಶುತಾರೆಯನು ಕರೆಯುತಿದ್ದೆವು—
ಲೀಲಾ, ಮುದ್ದು ಲೀಲಾ—ಎಂದು.

*   *   *

ದೇಹ ಮೃತವಾದರೂ ನೋವಾಂತ ಎಮ್ಮ ಚಿತ್ತಪಟದಲೂರಿ ನೆಲಸಿ, ಕೊನೆಯುಸಿರವರೆಗೂ ಎಮ್ಮ ಹಿಂಬಾಲಿಸುವಾ ಮೂರು ವರುಷಗಳ ಮುದ್ದು ಮೋಹಕ ಮೂರುತಿಯ ಅಮೃತಮಯ ನೆನಪಿಗವಳ ತಾಯ್ತಂದೆಗಳ ಕಂಬನಿಯ ಮುಡಿಪು—

ಈ ಕಿರುಕೃತಿ.



# ಬಿನ್ನಹ

ಆಧುನಿಕ ಕನ್ನಡ ಸಾಹಿತಿಗಳಲ್ಲಿ 'ಆನಂದ' ಎಂದರೆ ಸಣ್ಣ ಕತೆಗಳನ್ನು ಬರೆದವರು ಎನ್ನುವುದು ವ್ಯಕ್ತವಾದ ವಿಷಯ. ಅವರಿಂದ ರಚಿತವಾಗಿ ಪ್ರಕಟವಾಗಿರುವ ಈ 'ಪಕ್ಷಿಗಾನ' ಸಣ್ಣ ಕಥೆಗಳಲ್ಲ. ಇದರಲ್ಲಿ ಸೇರಿಸಲ್ಪಟ್ಟಿರುವ ಕೃತಿಗಳು, ಅವರು ಕನ್ನಡ ಶೈಲಿಯಲ್ಲಿ ಮಾಡಲೆಳಸಿದ ಒಂದು ರೀತಿಯ ನೂತನ ಪ್ರಯೋಗ. ಗದ್ಯ ಶೈಲಿಯಲ್ಲಿ ಸಾಮಾನ್ಯವಾಗಿ ಪದಶಯ್ಯೆಗೂ ನಾದಮಾಧುರ್ಯಕ್ಕೂ ಹೆಚ್ಚಾಗಿ ಅವಕಾಶವಿಲ್ಲ. ಛಂದಸ್ಸಿನ ನಿಷ್ಠುರವಾದ ಶೃಂಖಲೆಗಳಿಗೊಳಪಡಿಸದೆ, ಆದರೂ ಓದಲೆಳಸುವ ನಾಲಗೆಗೂ ಕೇಳಲೆಳಸುವ ಕಿವಿಗೂ ಹಿತವಾಗಿ ತೋರುವ ಮಾರ್ದವದಿಂದ ಕೂಡಿದ ದನಿಯಲ್ಲಿ ಕೃತಿಕಾರರು ತಮ್ಮ ಭಾವಗಳನ್ನು ಅಳವಡಿಸಿರುವ ಶೈಲಿ, ಇಲ್ಲಿಯ ವಚನ ಚಿತ್ರಗಳಲ್ಲಿ ಕಂಡು ಬರುತ್ತದೆ. ಗದ್ಯದ ಸೌಲಭ್ಯವನ್ನೂ ಪದ್ಯದ ಮಾಧುರ್ಯವನ್ನೂ ಒಟ್ಟುಗೂಡಿಸುವ ಒಂದು ಪ್ರಯೋಗ ಇಲ್ಲಿ ನಡೆದಿದೆ. ಇವುಗಳಿಗೆ ಪದ್ಯಗಳ ರೀತಿಯಲ್ಲಿ ಪ್ರಸ್ತಾರ ಹಾಕುವ ಹವ್ಯಾಸಕ್ಕೆ ಯಾರೂ ಹೋಗದಿರಲಿ ಎಂದು ಕೃತಿಕಾರರು ಬಯಸುತ್ತಾರೆ.

ಪ್ರಕಾಶಕರು

# ಅರಿಕೆ

ಇಲ್ಲಿ ಸೇರಿಸಲ್ಪಟ್ಟಿರುವ ಕೃತಿಗಳಲ್ಲಿ ಕೆಲವು ಸುಮಾರು ಹದಿಮೂರು ವರ್ಷಗಳ ಹಿಂದೆ ರಚಿತವಾದವು; ಉಳಿದವು ಈಚೆಗೆ ರಚಿತವಾದವು. ಇಲ್ಲಿನ ಮೊದಲ ಹತ್ತು ಕೃತಿಗಳನ್ನು ಧಾರವಾಡದ ಕರ್ನಾಟಕ ಕಾಲೇಜಿನ ಪ್ರೊಫೆಸರೂ–ನನ್ನ ಮಿತ್ರರೂ ಆದ ಶ್ರೀಯುತ ಆರ್. ವಿ. ಜಹಗೀರದಾರರು ಆದರದಿಂದ ಸ್ವೀಕರಿಸಿ, ತಾವು ಆಗ ನಡೆಸಿಕೊಂಡು ಬರುತ್ತಿದ್ದ "ಪ್ರೇಮ" ಮಾಸ ಪತ್ರಿಕೆಯಲ್ಲಿ ಪ್ರಕಟಿಸಿದರು. ಈ ಉಪಕಾರಕ್ಕಾಗಿ ನಾನು ಶ್ರೀಯುತ ಜಹಗೀರದಾರರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಆನಂದ

# ರಾಗಮಾಲಿಕೆ

# ಪಕ್ಷಿಗಾನ

---

## ೧. ಕುಟೀರವಾಣಿ

### ಪೀಠಿಕೆ

ನನ್ನ ಬಡಗುಡಿಸಲ ಹೆಸರು "ಆನಂದಕುಟೀರ".

ಒಂದು ದಿನ ನಡುಮಧ್ಯಾಹ್ನ. ಕುಟೀರದೊಳಗೆ ಮುರುಕು ಕಿಟಕಿಯ ಹತ್ತಿರ ಕುಳಿತು, ಹೊರಗಿನ ಪ್ರಪಂಚವನು ನೋಡುತಿದ್ದೆ. ಮನಸು ಬೇಸರದಿಂದ ತುಂಬಿ ಹೋಗಿತ್ತು. ಹೃದಯವು ನಿರಾಶೆಯಿಂದ ಬಿರಿಯುತಿತ್ತು. ಎಷ್ಟು ಆಸೆಗಳು! . . . ಎಷ್ಟು ಉದ್ಯಮ!! ಒಂದೂ ನೆರವೇರಲಿಲ್ಲವಲಾ!—ಎಂಬ ನೋವೊಂದು ಉಳಿದಿತ್ತು.

ಆಸೆಯೋ, ಆಕಾಶವನೇ ಆವರಿಸುವಂತಹುದು!—ಕಡಲನೇ ಹೀರಿ ಕುಡಿಯುವಂತಹುದು!! ಶಕ್ತಿ ಮಾತ್ರ ಇಲ್ಲ! ಇದೆಂತಹ ವಿಚಿತ್ರ! ಇಷ್ಟು ದುರ್ಬಲದ ದೇಹದಲಿ ಅದೆನಿತು ಪ್ರಬಲದಾಸೆಗಳು!

ನಿರಾಶೆ-ಬೇಸರ ಎಲ್ಲ, ಕುಟೀರದ-ಆನಂದಕುಟೀರದ—ಒಳಗೆ. ಕಿಟಕಿಯ ಹೊರಗೆ ಎಷ್ಟು ನೋಡಿದರೂ, ಎಲ್ಲಿ ನೋಡಿದರೂ ಆಸೆ ಭರವಸೆಗಳೇ ಕಣ್ಣನು ಒತ್ತುತಿವೆ! ಕಿವಿಯುಲಿಳಿಯುತಿವೆ!

ದೂರದ ಕಡಲತೀರದಿಂದ, ಅಲೆಯ ಘೋಷೆ ಅವಿಚ್ಛಿನ್ನವಾಗಿ ಭರವಸೆಯ ಸಂದೇಶವನು ಬೀರುತಿದೆ.

ಅದೋ ಆ ಮರ, ಈ ಗಿಡ, ಅಲ್ಲಿರುವ ಬಳ್ಳಿ, ಇಲ್ಲಿ ಕಾಣುವ ಪೊದೆ ಪ್ರತಿಯೊಂದರಲೂ ಉಕ್ಕುತಿದೆ ಆಸೆ! ತೋರುತಿದೆ ಚಿಗುರಿ ಹೂಬಿಟ್ಟು ಹಣ್ಣಾಗುವ ಭರವಸೆ!

ಅದೋ ಆ ಹಸುರುಕ್ಕಿ ಹಬ್ಬಿರುವ ಪೊದೆಯಲೊಂದು ಪುಟ್ಟಹಕ್ಕಿ ಕುಳಿತು ಹಾಡುತಿದೆ. ಅದರ ಹೆಸರೇನೋ ನಾನರಿಯೆ. ನನಗೆ ಕಾಣುತಿರುವುದು ಅದರ ಬಣ್ಣ ; ನನಗೆ ಕೇಳುತಿರುವುದು ಅದರ ಗಾನ. ಏನು ಸೊಗಸಿನ ಬಣ್ಣ ! ಅದೆಷ್ಟು ತೆರನ ರಾಗ ! ಒಂದು ಸಲ ಚಿಮ್ಮು ವುದು ತಿಳಿನೀರ ಚಿಲುಮೆಯಂತೆ! ಒಂದು ಸಲ ಉರುಳುರುಳಿ ಹೊಮ್ಮು ವುದು ಕಿರಿಝುರಿಯಂತೆ !! ಬಣ್ಣದ ಪುತ್ಥಳಿಯಲಿ ಗಾನದಮೃತ ! ಅದರ ಕೋಮಲವಾದ ಕಂಠದಲಿ ಹುಟ್ಟಿ ಹರಿಯುತಿದೆ ಭರವಸೆ! ಆಹಾ! ಯಾರಿಗಾಗಿ ಈ ಗಾನಮಧು . . . .?

ನಿರಾಶೆ ನಿರ್ನಾಮವಾಗಿ ಶಾಂತಿ ಮೊಳೆಯತೊಡಗಿತು.

" ಪಕ್ಷೀ, ನಿನ್ನ ಹೆಸರೇನು ? " ಎಂದು ಕೇಳಿದೆ.

" ನಾನರಿಯೆ " ಎಂದು ಹಾಡಿತು ಹಕ್ಕಿ.

ಆಹಾ ! ಹೆಸರಿಲ್ಲದ ಪಕ್ಷಿ! ಆದರೇನು ? ಕಾಗೆಗೆ ಹೆಸರಿದೆ! ಗೂಗೆಗೆ ಹೆಸರಿದೆ ! ನನಗೂ ಹೆಸರಿದೆ!—ಬಂತೆ ಭಾಗ್ಯ ? ಖ್ಯಾತನಾಮ ರೆನಿತು ಜನ ನಿರ್ನಾಮರಾಗಿಲ್ಲ ! ಹೆಸರಿಲ್ಲದಿರೇನು ? ತರತರದ ರಾಗ ರುಚಿಯಿರೆ !—ಗಾನದಿಂಪಿರೆ !

" ಓ ! ಹೆಸರಿಲ್ಲದ ಪಕ್ಷಿಯೇ, ಇಲ್ಲಿ ಬಾ " ಎಂದೆ.

ಪಕ್ಷಿಯು ಹಾರಿಬಂದು ಕಿಟಕಿಯಲ್ಲಿ ಕುಳಿತು,—

" ಕರೆದುದೇಕೆ ? " ಎಂದಿತು.

" ಅನಾಮಿಕ, ಯಾರಿಗಾಗಿ–ನಿನ್ನ ಗಾನ ? " ಎಂದು ಕೇಳಿದೆ.

" ಯಾರು ಮನವಿಟ್ಟು, ಕಿವಿಗೊಟ್ಟು ಎದೆತೆರೆದು ಆಲಿಸುವರೋ ಅವರಿಗೆ ".

"ಆಹಾ! ಇದೊ–ಇದೋ ನನ್ನ ಕಿವಿ, ನನ್ನ ಮನ, ನನ್ನ ಹೃದಯ ನಿನ್ನವು. ನನಗೆ ಗಾನ ಮಾಡುವೆಯಾ ? "

" ಓಹೊ ! ಮಾಡುವೆ ".

" ದಿನದಿನವೂ ಹಾಡುವೆಯಾ ? "

" ದಿನದಿನವೂ ಹಾಡುವೆ. ದಿನದಿನವೂ ಹಾಡುತಿರುವೆ ! "

" ಆಹಾ ? ಇದೆ ಮೊದಲು ನಾ ಕೇಳಿದುದು ! "

“ ಅದು ನನ್ನ ತಪ್ಪೆ? ನಿನ್ನೆದೆಯಲಾಸೆಗೆಡೆಗೊಟ್ಟೆ! ಕಡಲ ಹೀರಿ ಅಂಬರವನಪ್ಪುವ ಆಸೆ! ನಿನ್ನ ಮನ ಮುದುರಿ ಕಿವಿ ಮುಚ್ಚಿತು! ಇಂತಿರಲು ಹೆಸರಿಲ್ಲದ ಬಡಪಾಯಿಯ ಗಾನವ ಕೇಳಲು ಸಮಯವೆಲ್ಲಿ?”

“ ಇಲ್ಲ, ಇಲ್ಲ! ಹಾಗೆನ್ನದಿರು ಕಾಯ ತಳೆದ ಕಾಮನ ಬಿಲ್ಲೇ! ಈಗ ಎಲ್ಲ ಆಸೆಗಳೂ ಕರಗಿ, ಆರಿ ಗುರುತಿಲ್ಲದಾದುವು. ಹೊಸತೊಂದು ಆಸೆ ಮೂಡುತಿದೆ ಎದೆಯಲ್ಲಿ! ”

“ ಏನದು ? ’’

“ ನಿನ್ನ ಗಾನದಮೃತದಲಿ ತೋಯಬೇಕೆಂದು—ತಣಿಯಬೇಕೆಂದು! ”

“ ನಿನ್ನಾಸೆ ಫಲಿಸಿತೆಂದು ತಿಳಿ! ಬಯಕೆ ತೋರಲು, ಇಲ್ಲಿ ಬಂದು ಕುಳಿತು ಒಂದು ಸಲ ನೆನೆ ನನ್ನ ; ತೋಯಿಸುವೆನು - ತಣಿಸುವೆನು ನಿನ್ನ ! ”

“ ಸುಖಿಯಾದೆ! . . . .ಇರಲಿ, ನಿನ್ನ ಗಾನಕೇನ ಕೊಡಲಿ ? ”

“ ನಿನ್ನ ಕಿವಿ, ನಿನ್ನ ಮನ, ನಿನ್ನ ಎದೆ! ”

* * * * *

ನಾನಂದಿನಿಂದಾ ಪಕ್ಷಿಯ ಗೆಳೆಯನಾದೆ !

ಯಾವ ದಿನವಾದರೂ ಸರಿಯೆ, ಯಾವ ಹೊತ್ತಾದರೂ ಸರಿಯೆ, ಮುರುಕು ಕಿಟಕಿಯ ಬಳಿ ನಾ ಕುಳಿತು ಗೆಳೆಯನನೊಮ್ಮೆ ನೆನೆಯೆ ಅವನು ಎಲ್ಲಿಂದಲೋ ಮೂಡಿ ಬರುತಾನೆ!-ಹಾಡಿಕೊಂಡೇ ಬರುತಾನೆ! ಎನಿತು ದಿನ ಕೇಳಿರುವೆನೋ! ಏನೇನು ಕೇಳಿರುವೆನೋ! ಎಣಿಕೆಯುಂಟೆ? ಎಂತಹ ಗಾನರಸಲಹರಿ! ಅದರಲೇನು ರಾಗದೂರ್ಮಿಮಾಲೆ! ಒಂದೊಂದು ಗಾನವೂ ಒಂದೊಂದು ಕಥೆ! ಆ ಗಾನ ಕಥೆಗಳ ಸುಖವೋ ದುಃಖವೋ!—ಧೈರ್ಯವೋ ದೈನ್ಯವೊ!—ಪ್ರಣಯವೋ ಪ್ರೇಮವೋ!—ಚೆಲುವೋ ಒಲವೊ!

ಇದೋ, ಇವು ನನಗೆ ಆ ಪುಟ್ಟ ಅನಾಮಿಕ ಅಂಬರವಿಹಾರಿಯು ಹಾಡಿದ ಅಮರಗಾನಗಳಲಿ ಕೆಲವು. ಅದರ ಕಂಠಸಿರಿಯನೀ ಬಡ ನುಡಿಗಳಲಿ ವರ್ಣಿಸಲೆತ್ನಿಸಿರುವೆನು.

ರಸಿಕರೂ ಸಹೃದಯರೂ ಆದ ಶ್ರೋತೃಗಳಿರಾ, ಮನವಿಟ್ಟು, ಕಿವಿಗೊಟ್ಟು ಕೇಳಿ—ಎದೆದೆರೆದು ತುಂಬಿಕೊಳಿ. ನೀವು ಮೆಚ್ಚಿ ತಲೆದೂಗಿದರೆ, ನಾನು ಕಿಟಕಿಯ ಬಳಿ ಕುಳಿತುದು ಸಾರ್ಥಕವಾಯ್ತು—ಪಕ್ಷಿಯು ಹಾಡಿದುದೂ ಸಾರ್ಥಕವಾಯ್ತು.

ಇಂತು—

ಕುಟೀರವಾಸಿ

ಆನಂದ.

# ೨. ಆಕಾಂಕ್ಷೆ

ಮಧುಮಾಸದ ಮೊದಲ ದಿನಗಳು.

ಎಲ್ಲಿ ನೋಡಿದರೂ ತಾಯಿಯ ವಿವಿಧ ವಿಲಾಸ! . . . . . . . ಪುಷ್ಪಶೃಂಗಾರ!! ವರ್ಣವೈಖರಿ!!

ಮಧುಪಾನದಿಂದ ಮೈಮರೆತು ಮೊರೆಯುತಿಹ ಉನ್ಮತ್ತ ಭೃಂಗ ಸಂಕುಲದ ಎಣೆಯಿಲ್ಲದ ಪ್ರಣಯ ಕೇಳಿ!

ಸಹಸ್ರಸಹಸ್ರ ಖಗಕಂಠಗಳಿಂದೆ ದಿಕ್ಕುದಿಕ್ಕಿಗೆ ಪಸರಿಸುತಿಹ ಸುಮಧುರ ಗಾನ ತರಂಗ ತಾಂಡವ!

ಸುಳಿಸುಳಿದು, ಏರಿಳಿದು, ತೂರಿ ತೇಲಿ, ಸುಮಸುಂದರಿಯರನು ಚುಂಬಿಸುತ, ಸೌರಭವ ಸೂರೆಗೊಂಡು ಮುದವೇರಿ ಅಲೆಯುತಿಹ ಮಂದಾನಿಲ!

ಪೂರ್ವಾಕಾಶದಲಿ ಉಷಾಸುಂದರಿ, ಆಸೆಭರವಸೆಗಳ ಚಿಮುಕಿಸುತ, ಹೊಸತೊಂದು ಸೊಬಗಿಂದೆ ಮೆಲುಮೆಲನೆ ಮೂಡಿಬಹ ಮನ ಮೋಹಕ ಸಮಯ.

ಒಂದು ರಮಣೀಯ ಸರಸು: ಹೆಸರು "ಸುಮಸಾಗರ". ಅದರ ತುಂಬ ತಾವರೆಗಳು ಶೋಭಿಸಿವೆ. ಚೆನ್ನಾಗಿ ಅರಳಿಹವು ಕೆಲವು; ಅರೆಬಿರಿದಿಹ ಕೆಲವು; ಆದೆತಾನೆ ಗಾಢನಿದ್ರೆಯಿಂದೆಚ್ಚತ್ತವು ಕೆಲವು; ಇನ್ನು ಕೆಲವು ಮೊಗ್ಗುಗಳು.

ತಿಳಿನೀರ ಮೇಲೆ ಹರಡಿ ತೇಲುವ ಹಸುರೆಲೆಯ ಮಡಿಲಲ್ಲಿ ಬೆಳಗುತಿಹ ಶುಭ್ರಜಲಕಣಗಳು, ಈ ಸುಮರಮಣಿಯರು, ಮೂಡಿ ಬರುವುದರಲಿಹ ಪ್ರಿಯಸಖನಿಗಾಗಿ ಪಚ್ಚೆಯ ತಟ್ಟೆಯಲಿ ಕಳೆದ ರಾತ್ರಿಯ ವಿರಹಕಂಬನಿಗಳ ಕಾಣಿಕೆಯನು ಸಂಗ್ರಹಿಸಿಟ್ಟಂತೆ ತೋರುತಿತ್ತು.

ಸರೋವರದ ತಡಿಯ ಸಮೀಪದಲಿ ಹಿರಿದಾದ ತಾವರೆಯೊಂದು,

ಕಾಮುಕನಾದ ಮಂದಾನಿಲನ ಸೋಂಕಿನಿಂದಡಿಗಡಿಗೆ ಕಂಪಿಸುತ, ಮಧುಕರಿಯ ಮೊರೆಯನಾಲಿಸುತ, ತಿಳಿನೀರ ಮುಖರದಲಿ ನಿಜರೂಪವನೀಕ್ಷಿಸುತ, ತುಂಬುಯೌವನದ ಭರದಲ್ಲಿ ಬಳುಕಿ ಬಾಗಿ ನಿಂತಿತ್ತು.

ತಡಿಯ ಮೇಲೊಂದು ಕಾಲು ಹಾದಿ.

ಸುಂದರಿಯೊರ್ವಳು ಕೈಯಲಿ ತೆರತೆರನ ಹೂಗಳ ಬುಟ್ಟಿಯ ಹಿಡಿದು, ಮಧುಮಾಸಕೆ ಮೈಸೋತು, ಕಿರುದನಿಯಲಿ ಪ್ರಣಯ ಗೀತೆಯನಾಲಾಪಿಸುತ ಮೆಲುನಡೆಯಲಿ ಕುಲುಕುಲುಕುತ ಹೋಗುತಿದ್ದಳು. ಹೋಗುತಿದ್ದವಳು ಕುಸುಮೋತ್ತಮೆಯ ನೋಡುತ ನಿಂತಳು. ಅರಳಿದ ಕಮಲವನು ಕಂಡಾ ಕಾಮಿನಿಯ ಕಮಲನಯನಗಳರಳಿದುವು.

"ಆಹಾ!" ಎಂದಳು ಸುಂದರಿ.

ಕಮಲವು ಕೇಳಿತು "ನೀನಾರು?" ಎಂದು.

"ನನ್ನ ಹೆಸರು ಕಾಂತಾರಿ" ಎಂದಳು ಚೆಲುವೆ.

"ಇರುವುದೆಲ್ಲಿ—ಕಾಂತಾರಿ?"

"ಅರಮನೆಯಲ್ಲಿ".

"ಅ-ರ-ಮ-ನೆ! ಅದೆಂತಹ ಮನೆ?"

"ಅರಸ—ಅರಸಿಯರಿರುವ ಮನೆ."

"ಅ-ರ-ಸ!........ಅ-ರ-ಸಿ!........ಯಾರವರು?"

"ನಮ್ಮೆಲ್ಲರೊಡೆಯರು—ತಂದೆ ತಾಯಿ— ಪೋಷಕರು."

"ಹೇಗಿದೆ ಆ ಅರಮನೆ?"

"ಓ! ಬಹಳ ದೊಡ್ಡದಾಗಿ—ಬಲು ಚೆನ್ನಾಗಿ—ಶೃಂಗಾರವಾಗಿದೆ ಅದು! ಸುಖದ ನೆಲೆ! ಭೂಸ್ವರ್ಗ!!"

"ನಿನ್ನ ಕೆಲಸವೇನು ಕಾಂತಾರಿ?"

"ನಾನು ಅರಸಿಯ ಮಾಲಿನಿ."

"ಅರಸಿ!—ಹೇಗಿರುವಳವಳು, ಮಾಲಿನಿ?"

"ನಮ್ಮರಸಿಯು ಗುಣದ ಖಣಿ! ತ್ರಿಪುರಸುಂದರಿ!"

"ನಿನಗಿಂತ?"

"ನನಗೆ ನೂರ್ಮಡಿ!........ನಾನವಳ ದಾಸಿ!!"

"ಆ–ಹಾ?"

"ನಿನ್ನ ಹಾಗಿದೆ ಅವಳ ಮುಖ."

"ಆಮೇಲೆ?"

"ನಿನ್ನೆಸಳಿನಾಕೃತಿಯವಳ ಕಂಗಳು."

"ಹುಂ?"

"ನಿನ್ನೆಸಳ ವರ್ಣ ಅವಳ ಕಪೋಲಗಳು."

"ಹಾಗೆಯೇ?"

"ಅದೋ ಆ ದುಂಬಿಗಳಂತಿವೆ ಅವಳ ಅಳಕಾಳಿ."

"ಸರಿ!"

"ನಿನ್ನ ಮೃಣಾಳದಂತೆ ಕೃಶಾಂಗಿಯವಳು."

"ನಿಜವೇ?"

"ನಿನ್ನು ಸಿರಿಗೆಣೆಯವಳ ಮೈ ಪರಿಮಳ."

ತಳಿತ ಮಾಮರನ ಮರೆಯಿಂದ "ಕುಹೂ" ಎಂದಿತು ಕೋಗಿಲೆಯೊಂದು.

"ಆದೊ ಕೇಳಿದೆಯಾ?" ಎಂದಳು ಮಾಲಿನಿ.

"ಕೋಕಿಲಗಾನ!"

"ಅದನು ಮಿಂಚುವುದು ನಮ್ಮರಸಿಯ ಕಂಠ!"

"ನಾನು ನೋಡಬೇಕಲ್ಲ!—ಆ ಸುಂದರಿಯನ್ನ!"

"ನನ್ನೊಡನೆ ಬಂದು ನೋಡು."

"ಬರುವೆನು."

"ಬಾ."

ಮಾಲಿನಿಯು ಸಿರಿಹಿಡಿದು ನೀರಿಗಿಳಿದು, ಬಾಗಿ ಕೈಚಾಚಿ ಕುಸುಮವನು ಕಿತ್ತು ಬುಟ್ಟಿಯಲಿಟ್ಟುಕೊಂಡು ಕುಲುಕುತ್ತ ಹೊರಟಳು ಮತ್ತೆ.

"ಎಲ್ಲಿಗೆ ತೆರಳುವೆ ಅರವಿಂದೆ?" ಎಂದು ಕೇಳಿದ ಮಂದಾನಿಲ.

"ಅರಮನೆಗೆ!" ಎಂದಿತು ಕಮಲ.

"ಹೋಗುವೆಯಲ್ಲಿಗೆ—ಸುಂದರಿ!" ಎಂದು ದುಗುಡದಿ ಕೇಳಿತು ದುಂಬಿ.

"ಸುಂದರಿಯೆಡೆಗೆ!'' ಎಂದಿತು ಕಮಲ.

* * * *

ಅರಮನೆಯ ವಿಲಾಸಗೃಹದಲ್ಲಿ.

ಅರಸ ಅರಸಿಯರ ಪ್ರಣಯ ಪ್ರಸಂಗ ನಡೆದಿತ್ತು.

ಸರಸವನಾಡಿಯಾಡಿ ಸೋತಳು ಅರಸಿ. ಮೂಡಿದವು ಮುಖದಲಿ ಬೆವರು ಹನಿಗಳು. ನಿಟ್ಟುಸಿರೆಳೆಯುತ ಪವಡಿಸಿದಳು ಮೃದು ತಲ್ಪದ ಮೇಲೆ.

ಬಳಿಯಲೇ ಚಿನ್ನದ ತಟ್ಟೆ. ತಟ್ಟೆಯ ತುಂಬ ಹೂವಿನ ರಾಶಿ. ರಾಶಿಯ ಶಿಖರದಲಾ ಕಮಲ.

ರಾಜನ ಕಣ್ಣು ಬಿತ್ತು ಅದರ ಮೇಲೆ. ದುಷ್ಟರನು ನಿಗ್ರಹಿಸಿ ಶಿಷ್ಟರನು ಪಾಲಿಸುವ—ರಾಜದಂಡವನು ಹಿಡಿಯುವ—ಹಸ್ತವನು ಸೇರಿತು ಆ ಕಮಲ. ಬಳಲಿದ ದೇವಿಯನುಪಚರಿಸಲದೆ ಬೀಸಣಿಗೆಯಾಯ್ತು. ಕ್ಷಣಕಾಲ ಬಿಟ್ಟು ರಾಣಿಯು, ಮೆಲುನಗೆಯ ಸೂಸುತ್ತ ಎದ್ದು ಕುಳಿತು, ಆ ಪುಷ್ಪವ್ಯಜನವನು ರಮಣನಿಂದ ಕಸಿದುಕೊಂಡಳು.

"ಆಹಾ! ಸುಂದರಿಯ ಕೈಯಲಿ ಸುಂದರಿ" ಎಂದನು ರಾಜ.

ಹುಬ್ಬ ನಡುವೆ ಕಪಟಕೋಪವನಿಟ್ಟು, ಚೆಂದುಟಿಯಲಿ ಹುಸಿನಗೆಯ ಚೆಲ್ಲಿ, ಪ್ರಿಯನ ಹೂವಿನಿಂದ ಹೊಡೆದಳು ರಾಣಿ.

"ಹಹ್ಹಾ! ರಾಣಿಯ ಕೈಯಲ್ಲಿ ಸುಮರಾಣಿ!!'' ಎಂದನು ರಾಜ.

ಇಂತು ರಾಜರಾಣಿಯರ ಪ್ರಣಯಕಲಹದ ಆಯುಧವಾಯ್ತು ಆ ಮನುಮಥನ ಪ್ರಥಮ ಶರ!

* * * *

ಸಂಧ್ಯಾಕಾಲ.

ಅರಮನೆಯ ಪ್ರಾಕಾರದ ಹೆಬ್ಬಾಗಿಲಿನ ಬಳಿಯಲಿ ಆ ಕಮಲ! –ಬಾಡಿ, ಬತ್ತಿ, ನೆಲದಲೊರಗಿ, ಧೂಳುಮುಚ್ಚಿ ಕಂಗೆಟ್ಟು ಕೊರಗುತಿತ್ತು!

ಮಾಲಿನಿ ಪುನಃ ಕೈಯಲಿ ಹೂಬುಟ್ಟಿಯನು ಹಿಡಿದು ಒಯ್ಯಾರದಿಂದ ಆ ಮಾರ್ಗದಲಿ ಬಂದಳು. ಹೆಬ್ಬಾಗಿಲಿನ ಬಳಿ ಪ್ರಿಯನನು ಕಂಡು ಮಾತಿಗೆ ನಿಂತಳು.

ಅವಳ ಬುಟ್ಟಿಯಿಂದರೆಬಿರಿದ ಕಮಲವೊಂದು ಹೊರಗೆ ಇಣಿಕಿಣಿಕಿ ನೋಡುತಿತ್ತು.

" ಎಲ್ಲಿಗೆ ಹೊರಟೆ ತಂಗೀ ? " ಎಂದು ಕೇಳಿತು ನೆಲದಲೊರಗಿದ ಕಮಲ.

" ಅರಮನೆಗೆ, ಅಕ್ಕಾ " ಎಂದಳು ಬುಟ್ಟಿಯು ಕಮಲಬಾಲೆ.

" ಅಯ್ಯೋ, ಇಲ್ಲಿಗೇಕೆ ಬಂದೆ ? "

" ಏನಾಯ್ತು ?........ನರಳುವುದೇಕೆ ? "

" ನಾನೂ ಅರಮನೆಗೆ ಬಂದವಳು ! "

" ಆಹಾ ? "

" ಬೆಳಿಗ್ಗೆ ರಾಣಿಯ ಅಂತಃಪುರದಲಿದ್ದೆ ! ಈಗ ನೋಡು !- ಹೋಗಿಬರುವವರ ಕಾಲ ತುಳಿತ ! "

" ಕಾರಣ ?........ಕಾರಣ ? "

" ಅರಮನೆ ನಮಗಲ್ಲ, ತಂಗಿ ! ಏನಿದ್ದರೇನಲ್ಲಿ ? ನಮಗೆ ಬೇಕಾದುದಿಲ್ಲ. "

" ಹಾಗೆಂದರೇನು ? "

" ತೆಂಗಾಳಿಯ ತೀಟವಿಲ್ಲ ! ಮರಿದುಂಬಿಯ ಮುತ್ತಿಲ್ಲ !! ತಿಳಿನೀರಿನ ಕನ್ನಡಿಯಿಲ್ಲ !—ಅದು ನಮಗೆ ಜೀವನವಲ್ಲ—ಅಲ್ಲ !! "

" ಈಗ ಮಾಡುವುದೇನು, ಅಕ್ಕಾ ? ಬಂದುಬಿಟ್ಟೆನಲ್ಲಾ ! "

" ಮಾಡುವುದೇನು ! ಹಣೆಯಲಿ ಬರೆದುದ ಅನುಭವಿಸಿ ತೀರಲಿ, ತಂಗೀ ! "

ಪ್ರಿಯನೊಡನೆ ಮಾತ ಮುಗಿಸಿ ರಾಣಿಯೆಡೆಗೆ ಹೊರಟಳು—ಮಾಲಿನಿ.

# ೩. ಚಿರಸಮಸ್ಯೆ

ಕತ್ತಲ್ಗಡಲ ತಳದಲಿತ್ತು ಲೋಕ.

ಕೋಟಿ ತಾರೆಗಳಿಂದ ಕಿಕ್ಕಿರಿದ ಗಗನತಲ, ನಿಶಾಸುಂದರಿಯ ವಜ್ರಖಚಿತ ನೀಲಾಂಬರದ, ಹರಡಿದ ಸೆರಗಿನಂತೆ ಶೋಭಿಸಿತ್ತು.

ನೀರವ! ನಿಶ್ಚಲ!

ಅನಿಲನು ಕೂಡ ದಿನವೆಲ್ಲ ಅಲೆದಲೆದು, ಸೊಕ್ಕಿ ಮೆರೆದು ಸೊರಗಿ ಸೋತು ಸುಮ್ಮನಿದ್ದ.

ಒಂದು ಮನೆ.

ಅದರ ಹೆಸರು "ಮಾಯಾಲಯ". ಅದರಲೊಂದು ಕೊಠಡಿ. ಕೊಠಡಿಯ ನಡುವೆ ಬೆಳ್ಳಿಯ ಕಂಭ-ಕಂಭದ ಮೇಲೆ ಚಿನ್ನದ ಹಣತೆ. ಹಣತೆಯ ತುಂಬ ಚಂದನ ತೈಲ—ತೈಲದಿ ತೇಲುತ ಹತ್ತಿಯ ಬತ್ತಿ. ಬತ್ತಿಯ ತುದಿಯಲಿ ಪುಟ್ಟದು ಜ್ವಾಲೆ!

ಕುಣಿಯುತಿತ್ತು! ಬಳುಕುತಿತ್ತು! ಬೆಳಬೆಳಗಿ ಕತ್ತಲನ್ನು ಮೂಲೆ ಗೊತ್ತಿ ನಲಿಯುತಿತ್ತು! ಹೆಮ್ಮೆಯಿಂದ ಮೆರೆಯುತಿತ್ತು! ಪರಿಮಳವನುಸಿರುತಿತ್ತು!—ಆ ಜ್ವಾಲೆ.

ಕಿಟಕಿಯ ಬಳಿ ಯಾರೊ ಬರುವ ಸುಳಿವು!

ಕುಣಿಕುಣಿದು ಬಲು ಬಳುಕಿ ಗರ್ವದಿಂ ಮೆರೆದು ನಲಿಯುತಲಿದ್ದ ಜ್ವಾಲೆ ಸ್ತಬ್ಧವಾಯ್ತು! ಆಸೆಯಿಂದ ಆಲಿಸಿತು. ಕಣ್ಣ ನೆಟ್ಟು ನೋಡಿತು.

ಒಂದು ಪತಂಗ! ಬಣ್ಣಬಣ್ಣದ ಪತಂಗ!!

ಕವಿಯ ಗಭೀರ ಗೂಢಹೃದಯದಿಂದ ಹೊಮ್ಮಿಬಂದ ಚೆಲುವು ಕವಿತೆಯಂತೆ, ನಿಶೆಯುದರದಿಂದ ಮೂಡಿ ಬಂತು—ಆ ಪತಂಗ.

ಚಿಮ್ಮಿ ನೆಗೆಯುತ, ತಿರುಗಿ ತೇಲುತ, ಕುಣಿದು ನಲಿಯುತ ಬಂತು—ಆ ಪತಂಗ.

ಜ್ವಾಲೆಯನು ನೋಡಿ ಅಚ್ಚರಿಯಲಿ ಮಿಂದಿತು. ಉಸಿರನೆಳೆದೆಳೆದು

ಪರಿಮಳವ ಸೇವಿಸಿ ವಿಸ್ಮೃತಿಯಲಿ ಮುಳುಗಿತು! ಆಸೆಯಿಂದ ಹಿಗ್ಗಿ ಉಬ್ಬಿತು—ಆ ಪತಂಗ.

ಜ್ವಾಲೆಯ ಸುತ್ತ, ಏರಿ ಇಳಿದು ಸುತ್ತಿ ಸುತ್ತಿ ಹಾರತೊಡಗಿತು—ಆ ಪತಂಗ.

ಒಂದುಸಲ ಬಳುಕಿ,

"ಎನ್ನಾಸೆಯ ರನ್ನಾ, ಬಾ, ಬಾ!"

—ಎಂದಿತು ಮಾಯಾಜ್ವಾಲೆ.

"ನಿನ್ನ ಸೊಬಗಿದೇನು!....ಏನು ಪರಿಮಳ!! ಯಾರು ನೀನು?"

—ಎಂದು ಕೇಳಿತು ಪತಂಗ.

"ನಾನೊಂದು ಕುಸುಮ! ನೋಡು ನೋಡು, ನನ್ನ ಮೈಯ ಕಾಂತಿ! ಉಸಿರೆಳೆದು ನೋಡು ಎನ್ನುಸಿರ ಪರಿಮಳವ! ಬಾ, ಬಾ! ಸುಂದರಾ!"

"ಬಂದರೇನನೀಯುವೆ?"

ಬಳಿಗೆ ಸಾರದೆ ದೂರದಲೇ ಕುಣಿಕುಣಿದು ನಲಿಯುತಿತ್ತು—ಆ ಪತಂಗ.

"ಏನು ಬೇಕೊ ಅದನೆ ಕೊಡುವೆ! ಬಾರೊ ನಲ್ಲ!"

—ಎಂದು ಒಯ್ಯಾರದಿ ಬಳುಕಿ ಬಾಗಿ ಕರೆಯಿತು ಕನಕ ಜ್ವಾಲೆ.

"ಮಧುವುಂಟೆ ಹೇಳು?"

"ಅದಕೆ ನೂರ್ಮಡಿಯಾದುದಿದೆ! ಪ್ರಿಯಾ, ಬಾ!
ಮೈಗೆ ಮೈಗೊಟ್ಟು, ಬಾಯ್ಗೆ ತುಟಿಯಿಟ್ಟು ಬೆರೆತು ನೋಡು!!
ನಿನ್ನೆದೆಯ ಪರಿಮಳದಿ ತುಂಬುವೆ!
ಸ್ವರ್ಗದ ಸವಿಯನೆರೆಯುವೆ!!
ಕಾದು ಕಾದು ಕಾಯ್ದ ಎನ್ನೊಡಲ ಕಾವ ಸವಿಯ ಬಾ!"

—ಎಂದು ಸಾರಿ ಕರೆದಳು ಜ್ವಾಲಾಕಾಮಿನಿ.

"ಕಾಯ್ದೆಯಾ?........ಯಾರಿಗಾಗಿ?"

"ನಿನಗಾಗಿ! ನಿನಗಾಗಿ!! ನನ್ನ ಸುಂದರಾ, ನಿನಗಾಗಿ!
ಬಾ, ಬಾ! ಎನ್ನ ಕಣ್ಣಮಣಿ!—ಎನ್ನೆದೆಯ ಧಣಿ!!

—ಎಂದು ಕಿರಣದ ಬಲೆಯನೆಸೆದಳು ಮೋಸದ ಜ್ವಾಲೆ.

" ಆಹಾ ? ''

ಪತಂಗದೆದೆಯಲಿ ಬಿರುಗಾಳಿಯೆದ್ದಿತು !—ಕಾಮದ ಬಿರುಗಾಳಿ! ತಲೆ ತಿರುಗಿತು ! ಮೈಮರೆಯಿತು !! ನೂರುಬಣ್ಣದ-ಕಣ್ಣುಕಣ್ಣಿನ ಪತಂಗವು ಕುರುಡಾಯ್ತು !!

" ಬಾ! '' ಎಂದಳು ಥಳಕಿನ ಜ್ವಾಲೆ.

" ಬಂದೇ ! ''

—ಎನ್ನುತ ಒಂದೇಸಲಕೆರಗಿತು ಪತಂಗ !

ಮರುಕ್ಷಣದಲೆ " ಹಾ ! '' ಎಂದು ಚೀರಿ ಭೂತಲದಲೊರಗಿತು !

'' ಅಯ್ಯೋ ! ಅಯ್ಯೋ !! " ಎನ್ನುತ ನರಳತೊಡಗಿತು.

ಸುಟ್ಟುಹೋಯ್ತು ಬಾಯಿ—ಸೀದುಹೋಯ್ತು ರೆಕ್ಕೆ.

" ನೂರ್ಮಡಿ ! ನೂರ್ಮಡಿ !! ಅಯ್ಯೋ ! ಸಾವಿಗೆ ನೂರ್ಮಡಿ! ಏನು ಬೆಂಕಿ ! ಎಂತಹ ಮುತ್ತು!!—ಕಾಲನ ಮುತ್ತು ! ''

—ಎಂದು ಬೆಂದ ಬಾಯಿ ನೊಂದು ನುಡಿಯಿತು.

ಮೇಲೆ ಜ್ವಾಲೆ,

" ಹಹ್ಹಾ ! ''

—ಎನ್ನುತ ಬಳುಕಿ ಬಳುಕಿ ತಲೆಯ ಚಿಮ್ಮಿ ಬಲಿಯ ಮರೆತು ನಲಿಯಿತು !

*   *   *   *

ಮತ್ತೆ ಸದ್ದು !

ಮೊದಲಿನಂತೆ ಜ್ವಾಲೆ, ಕಿವಿಯ ಕೊಟ್ಟು ಕೇಳಿತು.

ಮತ್ತೊಂದು !............ಮರಿಪತಂಗ ! !

ಮೊದಲಿನಂತೆ ಕಥೆ!

ಜ್ವಾಲೆ, ಮೋಹವೆರಚಿ ಬಿಂಕ ತೋರಿ, ಕೂಗಿ ಕರೆದು ಬಲೆಯ ಬೀಸಿತು.

ಎರಗುವುದರಲಿತ್ತು, ಬುದ್ಧಿಗೆಟ್ಟು ಮೈಮರೆತು ಕುರುಡಾದ ಮರಿ ಪತಂಗ !

" ಬೇಡ ! ಬೇಡ !! ದೂರ ಸರಿ !........ಸಾಯುವೇ !! ''

—ಎಂದಿತು ಕೆಳಗೊರಗಿದ ಪತಂಗ—

—ಕಾಲನದವಡೆಯಿಂದ.

" ಬೇಡವೇಕೆ ? "

—ಎಂದು ಕೇಳಿತು ಮರಿಪತಂಗ.

" ಅದು ಕುಸುಮವಲ್ಲ ! ಅಲ್ಲಿ ಮಧುವಿನಿತಿಲ್ಲ!! "

" ಹಾಗಾದರೇನದು ! "

" ಮೃತ್ಯು !—ಮೃತ್ಯು !! ನನ್ನ ಮಾತ ಕೇಳು !........ಹಿಂತಿರುಗಿ ಬಾಳು ".

" ಏನು ಮಾತು !........ಈ ಕಾಂತಿ !........ಈ ಪರಿಮಳ!—ಇದೆಲ್ಲಿ !........ಮೃತ್ಯುವೆಲ್ಲಿ ! "

" ಬೇಡ ! ಬೇಡ !!........ಮೃತ್ಯು—ಸತ್ಯ ! "

" ಇದು ಮೃತ್ಯುವಾದರೆ, ಎನಗಿರಲಿ ಮೃತ್ಯುವೆ ! "

—ಎಂದಿತು ಮರಿ ಪತಂಗ.

ಇದ ಕೇಳಿ,

" ಬಾ, ಬಾ ! ಎನ್ನೆದೆಯ ರಾಜಾ ! "

—ಎಂದಿತು ಜ್ವಾಲೆ.

" ಇದೊ ಬಂದೆ !—ಎನ್ನೊಲವಿನ ರಾಣಿ ! "

—ಎನ್ನುತ ಕಣ್ಮುಚ್ಚಿ, ಎದೆಬಿಚ್ಚಿ ಎರಗಿತು—ಮರಿಪತಂಗ.

" ಅಯ್ಯೋ, ತಿಳಿಗೇಡೀ ! "

—ಎಂದು ಕೂಗಿತು ಬಿದ್ದ ಪತಂಗ.

ಮರುಕ್ಷಣದಲೆ " ಹಾ " ಎನ್ನುತ, ಬಾಯಿ ಬೆಂದು ರೆಕ್ಕೆ ಸುಟ್ಟು, ಗೋಳಿಡುತ ನೆಲಕುರುಳಿತು –ಮರಿಪತಂಗ.

" ಅಯ್ಯೋ ! ನೋವು !........ನೋವು ! ತಾಳಲಾರೆ !! ಸಾವು !-ಸಾವು ! "

—ಎನ್ನುತ ಹೊರಳಿತು ಮರಿಪತಂಗ.

" ಬೇಡವೆಂದು ಸಾರಿದೆನಲ್ಲೋ ! "

—ಎಂದಿತು ಮೊದಲು ಬಿದ್ದ ಪತಂಗ.

“ ಅಯ್ಯೋ ! ಕೇಳದೆ ಕೆಟ್ಟೆನಲ್ಲಾ ! ”

—ಎಂದುಸುರಿತು ದಾರುಣದ ದನಿಯಿಂದ—ಮರಿಪತಂಗ.

ಇದನು ಕೇಳಿ,

“ ಹಹ್ಹಾ ! ”

—ಎಂದು ಗಹಗಹಿಸುತ ವ್ಯೈ ಕುಲುಕಿತು ಜ್ವಾಲೆ !

ಅದೊ ! ಮತ್ತೆ ಸದ್ದು!!..................

# ೪. ಸಿಂಹಗಡ

ತೆಂಕಣದಿ ಹದಿನಾರು ಮೈಲಿಗಳಾಚೆ ಬಾಂದಳಕೆ ಭುಜಗೊಟ್ಟು ನಿಂತಿರುವ ಸಿಂಹಗಡವೇ—ಇದೋ ನಿನಗೆ ತಲೆಬಾಗುವೆನು.

ಶತಮಾನಗಳ ಹಿಂದೆ, ನರಜಾತಿಯಲಿ ಹರಿಯಂತೆ ಮೆರೆದ ವೀರಲೀಲಾಲೋಲ ಶಿವಪ್ರಭುವನು ಶಿರದಲಿ ಹೊತ್ತು ಮೆರೆಯಿಸಿದ ಸಿಂಹಗಡವೇ ಇದೋ—ನಿನಗೆ ವಂದಿಸುವೆನು.

ಅಂದು ನಮ್ಮ ನಾಡಿನ ಧರ್ಮ—ನಮ್ಮ ಹೆಣ್ಣುಮಕ್ಕಳ ಮಾನ, ಮೊಗಲ ಬಿರುಗಾಳಿಯಲಿ ತೂರಿಹೋಗುವುದರಲಿದ್ದಾ ಕಾಲದಲಿ, ಮಹಾ ಚಲದಂತೆ ಎದೆಗೊಟ್ಟು ಆ ಬಿರುಗಾಳಿಯ ಹುಟ್ಟಡಗಿಸಿದ ನರೋತ್ತ ಮನ ಪಾದರೇಣುವಿನಿಂದ ಧನ್ಯವಾದ ಪಾವನಕಾಯ ಸಿಂಹಗಡವೇ—ನಿನ್ನ ದರುಶನವೆನ್ನ ಕಂಗಳಿಗೆ ಗಂಗೆ!

ದಿನದಿನವು, ಉಷಾಂಗನೆಯ ಕಾಂತಿಮಯ ಮೃದುನಗೆಯ ಒಲವ ಕಾಣಿಕೆ ನಿನಗೆ ಸಲ್ಲುತಿದೆ ಮೊದಲು—ಸಹಜವಾಗಿ.

ದಿನದಿನವು ಬಾಲಾರ್ಕನ ಮಿಸುನಿದಿಟ್ಟಿಯ ಮೊದಲ ಪೂಜೆ ನಿನಗೆ ಸಲ್ಲುತಿದೆ ಮೊದಲು—ಉಚಿತವಾಗಿ.

ವೀರನಾಯಕ ಶಿವರಾಯನ ಧವಳಕೀರ್ತಿ ಕಾಲಚಕ್ರದುಪಟಳಕೆ ಸಿಲುಕದಂತೆ ಕಾಯುತಿಹ ನೆಚ್ಚಿನ ವೀರಭಟನಂತೆಸೆಯುತಿಹೆ! —ಓ, ದುರ್ಗರಾಜ!

ಆ ಸಮರವೀರನ ಸಾಹಸಕಥಾಲಹರಿ, ಆ ಧರ್ಮವೀರನ ಪುಣ್ಯ ಕಥಾಲಹರಿ ನಿನ್ನೆದೆಯ ಗೂಢಗುಹಾಂತರದಲುದ್ಭವಿಸಿ, ಕೂಡಿ ಹರಿ ಯುತಿಹ ದೃಶ್ಯ ಕುಣಿಯುತಿದೆಯೆನ್ನ ಚಿತ್ತನಯನದ ಮುಂದೆ!

ಆ ಸಂಕಟದ ಸಮಯದಲಿ ಧರ್ಮವನು ಹಿಡಿದೆತ್ತಿ, ಆರ್ತರನು ರಕ್ಷಿಸಿ ಸಾಮ್ರಾಜ್ಯವನು ಕಟ್ಟಿದ ಛತ್ರಪತಿಗೆ ನೆರವಿತ್ತ ಸಾಮಂತನಲೆ ನೀನು!

ಜಯದಿಂದ ಜಯಕೆ ಹೆಜ್ಜೆಯಿಟ್ಟು ಮುಂದರಿದ ಜಗಜಟ್ಟಿಯ ಜಯಪತಾಕೆಯ ನೆಡಲು ನೆತ್ತಿಯ ಮೇಲೆ ತಾಣವನಿತ್ತ ಶೂರನಲೆ ನೀನು!

* * * *

ಆದರಿಂದಾ ದೃಶ್ಯಗಳ—ಭಾವಗಳ ಹಿಂದೆ ಯಾವುದೋ ಖಿನ್ನತೆ ನಿನ್ನೊಡಲ ಬಿರಿಯುವಂತಿದೆ, ಎಲೆ ನಾಯಕದುರ್ಗ!

ಜೀವನದ ಸರ್ವಸ್ವವನೂ ಸೂರೆಗೊಂಡ ನಿರ್ಭಾಗ್ಯನ ದಾರುಣ ಮೋನದಂತಿಹುದು ನಿನ್ನ ನೀರವತೆ.

ಅಂದು ಲೀಲೆಯ ಮುಗಿಸಿ ಹೋದ ನಾಯಕನು ಮತ್ತೊಮ್ಮೆ ಬಂದೆಬರುವೆನೆಂಬೊಂದು ಅಚ್ಚಳಿಯದ ಭರವಸೆಯಲಿ ನಿರೀಕ್ಷಿಸುವಂತಿದೆ, ಧರಣಿಯನು ಬಿಗಿದಪ್ಪಿ ನಿಶ್ಚಲದಿ ಮಲಗಿಹ ನಿನ್ನ ಪರಿಯ ನೋಡೆ.

ಅಂದಿನಾ ದಿನಗಳಲಿ ನಿನ್ನ ವೀರನಾಯಕನೊಡಗೂಡಿ ನೀನೆಸಗಿದ ಅತುಳ ಸಾಹಸಕಾರ್ಯಗಳ ನೆನಪು, ಇಂದಿನೀ ಮಂದಿಯ ಮನದಿಂದ ಮಾಯವಾದುದೇ!—ಎಂದು—

ಆ ಅಪ್ರತಿಮ ವೀರನಂದು ಸಾಧಿಸಿದ ರಾಷ್ಟ್ರದೈಕ್ಯತೆಯ ಬಂಧವನು ಇಂದು ಈ ಜನರು ಮೌಢ್ಯದಲಿ ಹರಿದೊಗೆದರೇ! ಎಂದು--

ಅಂದಿನಾ ಬಿರುಗಾಳಿಯಿಂದು ಅದಕು ಬಿರುಸಾಗಿ ಬೀಸುತ್ತ ನಾಡನು ದಿಕ್ಕೆಡಿಸುತಿಹುದೇ! ಎಂದು—

ಅಂದು ಸಾಮ್ರಾಜ್ಯವನು ಕಟ್ಟಿ, ಧರ್ಮವನು ಹಿಡಿದೆತ್ತಿ, ಸ್ವಾತಂತ್ರ್ಯರಮಣಿಯಂಕದಲಿ ಮೆರೆದ ವೀರರ ವಂಶೋದ್ಭವರಿಂದು, ಧರ್ಮವನು ತುಳಿದು—ದಾಸ್ಯದಾಸಿಯನಪ್ಪಿ ಹತವೀರ್ಯರಾದರೇ! ಎಂದು—

ಅಂದು ಜನ್ಮದಾತೆಯ ತುಂಬುಗೈಯಿಂದ ರಸಾನ್ನವನುಂಡ ಸುಖಿಗಳ ಕುಲಜಾತರಿಗಿಂದು ಹೆರವರೆಂಜಲ ಕೈ ಅಗುಳ ಕೂಳೆ ರುಚಿಯಾಯಿತೇ! ಎಂದು—

ಮರುಮರುಗಿ ಮಾತೆಯ ತೊಡೆಯಲಿ ಬಿದ್ದು ಗೋಳಿಡುವಂತಿದೆ, —ನಿನ್ನ ಪರಿಯ ನೋಡೆ!

*  *  *  *

ಪೂರ್ವಿಕರ ಶೌರ್ಯಸಾಹಸೋದ್ಯಮಗಳಿಗೆ ಚಿರಸಾಕ್ಷಿಯಾಗಿರುವ ಸಿಂಹಗಡವೇ ಮರುಗಿ ನೋಯದಿರು

ಭಾರತಾಂಬೆಯ ವೀರಗರ್ಭಸುಧಾಂಬುಧಿಯು ಇಂಗಿಹೋಯ್ತೆಂದು ಕೊರಗಿ ಶಂಕಿಸದಿರು.

ಅದೋ ಕೇಳು !—ಆಲಿಸಿ ಕೇಳು !!

ಭರತವರ್ಷದ ಮೂಡಲಲಿ, ಪಡುವಲಲಿ, ತೆಂಕಣಲಿ, ಬಡಗಲಲಿ ತಂಡೋಪತಂಡ ಹುರಿಗೊಂಡ ನಾಡಮಕ್ಕಳ ಹರಿಗೊರಳ ಹುಂಕೃತಿಯ ನಾಲಿಸಿ ಕೇಳು !

ಸುಸಮಯ ಕೂಡಿಬರುತಿಹುದೆಂದು ತಾಳ್ಮೆದಾಳು !

ಲೋಕದಲಿ ಕುಗ್ಗಲು ಧರ್ಮ ಹಿಗ್ಗಲಧರ್ಮ ತಾನವತರಿಸಿ ತಿರೆಯ ಸಂಕಟವ ಅಳಿಪೆನೆಂದಭಯವಿತ್ತ ಅಸುರಾರಿ ತಾಯ ಬಸಿರಲಿ ಮತ್ತೊಮ್ಮೆ ಮೂಡದಿಹನೇ !

ಕಾಲದೌರ್ಭಾಗ್ಯದಿಂದೆ ಕಳೆಗುಂದಿದ ಜನ್ಮಭೂಮಿಯ ಅಮಲ ಕೀರ್ತಿ ನವತೇಜದಲಿ ದಿಗಂತಗಳ ದಾಂಟುತ ಮತ್ತೊಮ್ಮೆ ಬೆಳಗದಿಹುದೇ !

ಹೊಸತೊಂದು ಬೆಡಗಿನಲಿ—ಹೆಮ್ಮೆಯಲಿ—ಗಾಂಭೀರ್ಯದಲಿ ಧರಣಿದೇವಿಯ ಸಿರಿಯರಂಗದೊಳು ಮತ್ತೊಮ್ಮೆ ಮೆರೆಯಳೇ ಭರತಭೂಮಾತೆ ಭುವಿಗಚ್ಚರಿಯ ಬೀರಿ !

ಎಲೆ ದುರ್ಗಶ್ರೇಷ್ಠ, ತಾ ಕಾಯುತಿಹ ಕಾಲ ಸನ್ನಿಹಿತವಾಗೆ, ಭಾರತಿಯ ಬಸಿರ ಪಾಲ್ಗಡಲಲಿ ಮತ್ತೊಮ್ಮೆ ರವಿಯಂತೆ ಮೂಡುವನು —ತಂದೆ.

ಆ ಕ್ಷಣದಿಂದ, ಅಮರರೂ ಕರುಬುವಂತೆ, ಬೆಳಗುವಳು—ಬೀರುವಳು—ಮೆರೆಯುವಳು—ನಲಿಯುವಳು, ನವತೇಜದಲಿ ರಾಜಿಪಳು— ತಾಯಿ ಭರತಾಂಬೆ.

ನಮೋ, ಅಚಲೇಂದ್ರ !

# ೫. ಸಂಕಟ - ಸಮಾಧಾನ

ಬೇಸಗೆಯ ನಡುವಗಲು.

ಬಿಸಿಲ ಬೇಗೆಯಲಿ ಜಗವೆಲ್ಲ ತಲ್ಲಣಿಸುತಿದೆ.

*   *   *   *

ಅದೋ, ನನ್ನೆದುರಿನಲೊಂದು ನುಗ್ಗಿಯ ಮರ ಹೂವಿನ ಸುಗ್ಗಿಯಲಿ ತೂಗುತಿದೆ ಜಗ್ಗಿ.

ಬಳಲಿ ಬಾಯಾರಿದ ದುಂಬಿಗಳು ಹಿಂಡುಹಿಂಡಾಗಿ ಮುತ್ತುತಿವೆ ಹೂ ಗೊಂಚಲುಗಳ.

ಸುಮರಾಶಿಯ ಸುಧಾಕೋಶವನು ಸೂರೆಗೊಳ್ಳುತಿಹ ಅಳಿಕುಲದ ಉನ್ಮತ್ತ ಝೇಂಕಾರಕೆ ದನಿಗೂಡಿಸಲು ಹಾತೊರೆಯುತಿದೆ—ಎನ್ನೆದೆ.

ಅರಳಿದ ಹೂಗಳ ತೆಕ್ಕೆಯಲಪ್ಪಿ, ತರತರದ ಕೇಳಿಯಲಿ ಮೆರೆಯುತಿಹ ಮಧುಪಗಳ ನೋಡಿನೋಡಿ, ಒಂದು ಕ್ಷಣದಲೊಂದೆ ಬಯಕೆಯು ನೂರಾರು ರೂಪದಲೆನ್ನೆದೆಯ ಹೊಕ್ಕು ಬಿರಿಯುತಿದೆ!

*   *   *   *

ಆ ಮರದೊಂದು ರೆಂಬೆಯ ಮೇಲೆ ಪಕ್ಷಿಗಳೆರಡು ಕುಳಿತಿಹವು ಮೈಸೋಂಕಿ—ಸತಿಪತಿಗಳನ್ಯೋನ್ಯದಲಿ.

ಗಂಡೊಮ್ಮೆ ಮುದವಾಂತು ತಿವಿಯುವುದು ಹೆಣ್ಣನು ಕೊಕ್ಕಿನಿಂದ.

ಒಮ್ಮೆ ಎದುರು ರೆಂಬೆಗೆ ಹಾರಿ, ಬಣ್ಣಬಣ್ಣದ ಗರಿಗೆದರಿ ಕುಣಿಯುವುದು ತನ್ನಿನಿಯಳ ಕಣ್ಣಮುಂದೆ.

ಹೆಣ್ಣೆಡಕೊಮ್ಮೆ ಕೂರುತ್ತ, ಬಲಕೊಮ್ಮೆ ಕೂರುತ್ತ, ಕೊರಳ ಕೊಂಕಿಸಿ ನೋಡುವುದು ಕಣ್ಣಣಿಯುವಂತೆ.

ಹಾಡುವುದೊಮ್ಮೆ, ಬೇಡುವುದೊಮ್ಮೆ, ಬೇಟದುರುಬಿನಲಿ ಕಾಡುವುದೊಮ್ಮೆ—ಗಂಡು.

ಕೇಳುವುದೊಮ್ಮೆ, ಕೇಳದಿನ್ನೊಮ್ಮೆ, ಕಾಂತನ ಪ್ರೇಮಕೆ ಸೋಲುವುದೊಮ್ಮೆ—ಹೆಣ್ಣು.

ಸೋತ ಪ್ರಿಯಳ ಪಕ್ಕದಲಿ ಕುಳಿತು ಕೊಕ್ಕಿನಲಿ ಕೊಕ್ಕಿಡಲು, ತನುಮನಗಳ ಬೆರಕೆಯುಲಿ ತಲ್ಲೀನವಾಗುವುವು—ಗಂಡು ಹೆಣ್ಣು.

ಪ್ರೇಮುದಾವರಣದಲಿ ನಡೆಯುತಿರುವೀ ದಿವ್ಯನಾಟಕವ ನೋಡ ನೋಡುತ, ನೂರಾರು ಸವಿನೆನಪುಗಳೆಚ್ಚರಗೊಂಡು ಕೊಚ್ಚುತಿಹವೆನ್ನ ಮನವ!

*          *          *          *

ಆಸೆ ಹಿರಿದಾಗೆ ಎದೆಯುರೆನೋವಿಗೆಡೆಯಾಗೆ, ನೆರೆಬೇಸರದಿ ನಯನಗಳ ತೇಲಿಸಲತ್ತ—ಅದೊ ಅಲ್ಲಿಯೂ ನಡೆಯುತಿದೆ!—ಅದೆ ನಾಟಕ!

ದೂರದಲೊಂದು ಹೊಂಗೆಯ ಮರ ಹೂವಿನ ಹೊದಿಕೆಯ ಹೊದ್ದು ಮೆರೆಯುತಿದೆ.

ಅದರಡಿಯಲಿ ಹೂಮಳೆಗರೆದು ಶೋಭಿಸಿದೆ ಮೃದುತಲ್ಪವಾಗಿ. ತಣ್ಣನೆ ನೆರಳಿನಲಾ ಸುಮರಂಗದ ಮೇಲೆ ಹರೆಯದ ಗೊಲ್ಲಗೊಲ್ಲತಿಯ ರಿಬ್ಬರು ಸರಸನಲ್ಲಾಪದಲಿ ಕೂಡಿ ಮರೆತಿಹರು ಸುತ್ತಣ ಜಗವ.

ನಗೆನೋಟ-ಸವಿಮಾತ ಹುಚ್ಚುಹೊಳೆ ಹರಿಯುತಿದೆ ತಡೆಯಿಲ್ಲ ದಂತೆ.

ಹಳ್ಳಿಯ ರಸಿಕನು ಹೊಂಗೆಯ ಹೂಗೊಂಚಲೊಂದನಾ ಗೊಲ್ಲಳ ಅಂದದ ತುಂಬುಕಬರಿಗೆ ಸಿಕ್ಕಿಸಹೋಗುವನು.

ಬಿನ್ನಾಣಿ ಗೊಲ್ಲಳು, ಒಯ್ಯಾರದಲತ್ತಿತ್ತ ಬಳುಕುತ್ತ, ತಪ್ಪಿಸಿ ಕೊಳ್ವಳು.

ಬಿಡುವನೆ ರಸಿಕ!—ಸೋಲುವನೇ!

ಸೆರೆಗೈದು ಬೆಡಗುಗಾತಿಯನು ತನ್ನ ಗಂಡುತೋಳಿನಲಿ, ಮುಡಿಸಿ ಮುದ್ದಿಸಿದ ಹೂಗೊಂಚಲನಾಕೆಯ ಹೆರಳಿಗೆ.

ಮುಡಿಸಿ ಗೆದ್ದ ರಸಿಕವೀರ, ಹೀರಿದನು ಕಾಣಿಕೆಯ ಗೊಲ್ಲ ತಿಯ ಚೆಂದುಟಿಗಳಿಂದ!

ಆಹಾ! ಎಂದಿಗೂ ಮುಗಿಯದೀಯೊಂದೆ ಆದಿರಸನಾಟಕವ, ಎನಿತು ಪಾತ್ರಗಳೆನಿತು ರೂಪದಲೆನಿತು ವೈವಿಧ್ಯದಲಿ, ಅದೆನಿತು ರಂಗ

ಗಳಲಿ ಆಡಿ ತೋರುತಿಹರು !

* * * *

ಆಡಿ ನಲಿಯಲು ಬಯಸುತಿಹ ಆಟಗಾರನ ಮನ ಆಟಗಳ ಬರಿದೆ ನೋಡಿ ತಣಿವುದುಂಟೇ !—ಎಂದು ಹಲುಬಿ ಹಂಬಲಿಸಿ ದಿಕ್ಕುದಿಕ್ಕಿನ ಉತ್ತರವನರಸುವಂತೆ ಮೊಗವ ತಿರುಗಿಸಲು—ಕಂಡುದೇನಿತ್ತು ?

ಪಶ್ಚಿಮ ದಿಗ್ದೇಶದಲಡಿಯುಸಿಟ್ಟಿಹನಾಗಲೆ ಪದ್ಮಸಖ.

ಸಂಜೆವೆಣ್ಣು ಬಳಿ ಸಾರುತಿಹನ ಮೈ, ಮಿಸುನಿರಸಲೇಪದಲದೆ ನಿತು ಶೋಭೆಯಿಂ ಕಂಗೊಳಿಸುತಿದೆ !

ಆಹಾ ! ಇನ್ನೇನು !—ತನ್ನಂಗನೆಯು ಬಳಿಸಾರುವನು !—ಬೆರೆಯುವನು ! ಮೈಮರೆತು ಮೆರೆಯುವನು—ದಿನನಾಥನು !

ಮನದನ್ನೆಯಿಂದಗಲಿ, ಆರ್ನೂರು ಮೈಲಿಗಳೀಚೆ ದುರ್ದಮ್ಯ ಬಯಕೆಗಳಿಂದ ಬಳಲುತಿಹ ಬಡಪಾಯಿಯ ಹಂಗಿಸುವಂತೆಸೆಯುತಿಹನು !—ಸಂಜೆಬಾನಿನೊಳಿಳಿಯುತಿಹ ದಿನಮಣಿ.

* * * *

ಸಾವಧಾನದಲಿಳಿದಿಳಿದು ಮರೆಯಾದನು ರಕ್ತರವಿ ಪಡುವಲ ಪರ್ವತಮಾಲೆಯ ಹಿಂದೆ.

ಮೆಲುಮೆಲನೆ ಅಡಿಯಿಡುತ ಬಂದಳು ನಿಶೆಯನಾರಿ ತಿರೆಯ ಮೇಲೆ ಸೆರಗಬೀಸುತ.

ಅದೊ ! ಅದೋ ! ಮೂಡಲಲಿ ಇನಿಯಳನಿಣಿಕಿಣಿಕಿ ನೋಡುತ ಉತ್ಸಾಹಮುಬ್ಬಿನಲೇರುತಿಹನು ಪೂರ್ಣಚಂದ್ರಮನು.

ಬಾಂದಳದ ಕೋಟಿತಾರೆಗಳಿಗೆ—ಭೂತಲದ ನಿಶೆರಮಣಿಗೆ ತಾನೋರ್ವನೇ ಏಕನಾಯಕನೆಂಬ ಹೆಮ್ಮೆಯ ಹುರುಪಿನಲಿ ಮೇಲು ಮೇಲಕೇರಿದನು ಶಶಾಂಕ.

ಏರುತೇರುತ ಅವನೊಡಲೊಲವು ಮಿತಿಮೀರಿ ತುಳುಕಿತೆಂಬಂತೆ ಎಲ್ಲೆಲ್ಲು ಚೆಲ್ಲಿ ಪಸರಿಸಿತು ಬೆಳುದಿಂಗಳು.

ತಿಳಿಗೊಳದೆದೆಯಲಿ ಕ್ರೀಡೆಯನಾಡಿ, ಗುಡ್ಡಬೆಟ್ಟಗಳ ಮೈಯನಪ್ಪಿ, ಗಿಡಮರಗಳ ತುದಿಯ ಮುತ್ತಿ, ಹಚ್ಚನೆ ಬಯಲಲಿ ಹರಡಿ

ಬಿದ್ದಿಹುದು—ಹಿಮಕರನ ಕಿರಣರಾಶಿ.

ಆಹಾ! ಈ ಪರಿಯ ತನುವಾದ ತಿಂಗಳಿನ ಬೆಳಕಿನಲ್ಲಿ ನಿತು ದಿನ ನಾವಿರ್ವರೂ ಜೊತೆಗೂಡಿ, ಒಮ್ಮನದಿ ತೇಲಿಬಿಟ್ಟಿಹೆವೋ ತನು ಮನಗಳ!

ಆ ದಿನಗಳಲಿ ನಮ್ಮೊಲವಿಗೆ ನೆರವಾಗಿ ಕಳೆಯಿತ್ತ ಚಂದಿರನಿಂದು ಅರಿಯಂತೆ ಇರಿಯುತಿಹನು ನಿಷ್ಕರುಣೆಯಿಂದ!

*  *  *  *

ಈ ಹಲವು ದೃಶ್ಯಗಳೆನ್ನೆದೆಯ ಹಲವು ತೆರದಲಿ ಪೀಡಿಸಿದೊಡೇನಂತೆ!—ಮನದ ಮಂತ್ರಶಕ್ತಿ ನನ್ನದಾಗಿರಲು!!

ನೋವಾಂತ ಎದೆಯಿಂದ ಹೊರಿಗೊಂಡು ಮಿಂಚುತಿಹ ಎನ್ನ ಮನಕಾರ್ನೂರು ಮೈಲಿಗಳೇತರ ದೂರ!

ಹೊರಗಣ್ಣ ಮುಚ್ಚಿ ಒಳಗಣ್ಣ ತೆರೆದೆನೆಂದೊಡೆ ಅದರ ಮುಂದೆ ಮೂಡುವುದೊಂದು ರಮಣೀಯ ರಾಜ್ಯ!

ಆ ರಾಜ್ಯರಂಗದಲಿ ಹೂಡುವೆನು ಅನಾದಿ ನಾಟಕವ!

ದುಂಬಿಯಾಗಿ ಮಧುವಹೀರಿ, ಪಕ್ಷಿಯಾಗಿ ಒಲವತೋರಿ, ಚೆಲುವೆಯೊಡನೆ ಗೊಲ್ಲನಾಗಿ ಸರಸವಾಡಿ ಸುಖಿಸುವೆ!

ಅಲ್ಲಿ ನಾವೆ ನಟರಾಗೆ, ನಾವೆ ನೋಟಕರಾಗೆ, ಕೊನೆಗಾಣುವ ಭಯವಿಲ್ಲದೆ ನಡೆಯುವುದೆಮ್ಮ ನಾಟಕ!!

ಇದೋ, ಮೊಗದ ಕಂಗಳ ಮುಚ್ಚಿ—ತೆರೆದೆನು ಮನೋನಯನಗಳ!

# ೬. ಬೆಸ್ತ

ಬೆಸ್ತನೋರ್ವನು ಬಲೆಯ ಬೀಸುತಿಹನು.

ಜೀವದನಂತವಾಹಿನಿಯಲ್ಲಿ ಬಿಡುವಿಲ್ಲದೆಯೆ ಬೀಸುತಿರುವನು.

ಹೊನ್ನು ಹೆಣ್ಣು ಮಣ್ಣಿನಾಸೆ, ಕೀರ್ತಿಯಾಸೆ ಅದು ಇದು ಯಾವುದೆಲ್ಲವನು ಗಳಿಸೆ ಸರ್ವೇಶತನದಾಸೆ–ಇವು ಅವನ ಬಲೆಯ ಹಾಸುಹೊಕ್ಕುಗಳು.

ಮಡದಿ ಮಕ್ಕಳ ಮೋಹ, ಬಂಧು ಮಿತ್ರರ ಸ್ನೇಹ, ಸುಖವ ಸವಿಯಲು ದುರ್ದಮ್ಯದಾಹ–ಇವು ಬಲೆಯ ಗುಂಡಗಳು.

ಕಾಮಿನಿಯ ಕಣ್ಬೆಳಕು! ಮೋಹಿನಿಯ ಮುಗುಳ್ನಗೆ! ಭಾಮಿನಿಯ ಬಾಹುಸೆರೆ! ಅಂಗನೆಯ ಅಧರಸುಧೆ!—ಇವೆ ಬೆಸ್ತನೆಸೆವ ರುಚಿಯ ಕಾಳ್ಗಳು.

ಆ ಕಪಟಿ ಬೆಸ್ತನು ಬೀಸಿದ ಬಲೆಯ ಮೇಲೆಳೆಯೆ, ಬಲೆಗೆ ಬಿದ್ದಿರುವುದಾಗ ತಿಳಿವುದು !

ಆದರೇನು ? ಕಾಳ್ತಿಂದು ಕಣ್ಮುಚ್ಚಿ ಬಿದ್ದುದಾಯ್ತು ಬಲೆಗೆ!

ಇನ್ನಿರುವುದೊಂದೆ ಮುಂದೆ–ಪಾಕಸಂಸ್ಕಾರ !!

* * * *

ಇಂತು ಕಪಟಿ ಬೆಸ್ತನೋರ್ವನು ಬಲೆಯ ಬೀಸುತಿರುವನು.

ಕೊನೆಮೊದಲಿಲ್ಲದ ಜೀವವಾಹಿನಿಯ ಪಾತ್ರದಲಿ ಬೀಸುತಿಹನು!

—ಹಗಲಿರುಳೆನ್ನದೆ, ಬಿಡುವ ಕಾಣದೆ—ಬೀಸುತಿಹನು.

# ೭. ಮಿಣುಕು ಹುಳು

ನಡುರಾತ್ರಿ.

ಒಂದು ಸಲ ಮಳೆಬಂದು ನಿಂತು, ಹೊಸ ಮೋಡ ಮುಸುಕಿ ಕತ್ತಲು ಹೇಳತೀರದಂತಿತ್ತು.

ಕಂಪುಗೂಡಿ ತಂಪುಗಾಳಿ ಬೀಸುತಿತ್ತು.

ಬಿರುಸಾಗಿ ಬೀಸಲೊಂದುಸಲ ಗಾಳಿ ನಂದಿಹೋಯ್ತೆನ್ನ ಕುಟೀರದ ಹಣತೆ. ಮರಳಿ ಅದ ಹೊತ್ತಿಸಲು ಬೇಸರವಾಗೆ ಹೊರಗೆ ಬಂದು ಗಾಳಿಗೆ ಮೈಗೊಟ್ಟು ನಿಂತೆ.

ಅದೇನು ಕತ್ತಲೆ !

ಮೈಯನು ಒತ್ತುವಂತೆ !—ಬಗೆದರೆ ಕೈಗೆ ಮೆತ್ತಿಕೊಳುವಂತೆ ತೋರುತಿತ್ತು !

ಪ್ರಳಯಕಾವ್ಯಕೆ ಕಾಳಪೀಠಿಕೆಯಂತೆ ಕಾಣುತಿತ್ತು !

ಹಾಗೆಯೇ ಯೋಚಿಸುತ ನಿಂತೆ.

ಬರಬರುತ ಆ ಕಾಲಿಮೆಯುಲೆನ್ನ ಕಾಯ ಕರಗಿ ಬೆರೆತು ಹೋದಂತೆ ಅನುಭವವಾಯ್ತು.

ಯೋಚನೆಯಲಿ ಮಾತ್ರ ನಾನುಳಿದೆ.

ಇಂತಿರಲು, ದೂರದ ಕತ್ತಲಂತರಾಳದಲಿ ಮಿಣುಕುಹುಳುವೊಂದು ತೇಲುತ ಕಾಣಿಸಿಕೊಳೆ ನನಗೆ ಕಣ್ಣಿಹುದು ನೆನಪಾಯ್ತು.

ಅಳಿದಳಿದು ಬೆಳಗುತಿದ್ದುದರ ಕಾಂತಿ ಪ್ರಣಯಕೆಳಸಿ ನಿಶಾಸುಂದರಿ ಯಾರನೋ ಕಣ್ಸನ್ನೆ ಮಾಡಿ ಕರೆಯುವಂತೆ ತೋರುತಿತ್ತು.

ಏಕೊ ಏನೊ ಕಾಣೆ "ಬಾ"—ಎನ್ನುವ ತೆರದಲಿ ಕೈಯ ಚಾಚಿದೆ.

ಮಿಣುಕುಹುಳು, ಮಿನುಮಿನುಗುತ ಕುಣಿಕುಣಿಯುತ ಬಂದೆನ್ನ ಬೆರಳ ತುದಿಯಲಿ ನೆಲಸಿತು.

ನೆಲಸಿ, ಬೆಳಕ ಬೀರತೊಡಗಿತು.

ಅದ ಕುರಿತು ಪಿಸುಮಾತಿನಲಿಂತುಸುರಿದೆ ನಾನು :—

“ ಓ! ಕತ್ತಲರತ್ನವೇ,

ಜೀವಕೋಟಿಯ ಮಾಲೆಯಲಿ ನಿನ್ನ ತಾಣವತಿ ಕಿರಿದೆಂಬನಲೆ ಮಾನವ !

ನಿನ್ನ ಮಿಣುಕುಹುಳು ಎಂದು ಕರೆವನಲೆ?

ಅವನ ಕರುಬು ನುಡಿಯ ಕೇಳಿ ನೋಯದಿರು ಮಿತ್ರಾ !

ಯಾವ ಮಹಾಚಿತ್ತದಿ ಮದಗಜವು ಹೊರಟಿತೋ ಅದೆ ನಿನಗು ತೌರೂರು—ಮರುಗದಿರು.

ಆ ಹೆಸರು ತಾನೆ? ಅದು ಬೇಡ- ಬಿಡು.

ನಿನ್ನ ಕೊರಳಿಗೆ ನಾ ಹಾಕುವೆನು ಹೊಸ ಹೆಸರುಗಳ ಮಾಲೆಯ !

ಓ! ಕಾಂತಿಮಣಿ ಕೇಳು,—

ಕಾರ್ಮೋಡ ಮುಸಿದು ಮುಸುಕಲು ಜಿನುಗಿ ಬಂದ ಚಂದ್ರ ಸುಧಾಬಿಂದು ನೀನು !

ಸ್ವರ್ಗದಿಂದ ಮರ್ತ್ಯಕಿಳಿದ ಅಮೃತದ ಹನಿ !

ಮುಗಿಲ ಮುಚ್ಚಳವ ತೂರಿಬಂದ ಕಿರುತಾರೆ !

ಜ್ಯೋತಿಲತೆಯ ಬಿಟ್ಟುಬಂದ ಬೆಳಕ ಮುಗುಳು !

ನಿಶೆಯ ಕಾಳ್ಪಸಿರ‍್ಗಡಲಾಣಿಮುತ್ತು !

ನಿಸರ್ಗದ ನಿದ್ದೆಯಲಿ ಮೂಡಿ ಕಾಣುತಿಹ ನಲ್ಗನಸು !

ವಿಶ್ವಕವಿಯ ಗೂಢಚಿತ್ತಮಥನದಿಂದ ರೂಪುಗೊಂಡ ಚೆಲುವು ಕವನ !

ಕತ್ತಲೆಂಬ ನಿರಾಶೆಯಲಿ ನೀನೊಂದು ಭರವಸೆಯ ಮೃದುಕಿರಣ !

ಎಲೆ ಜ್ಯೋತಿಜೀವಿ, ನಿಶೆಯೆಂಬ ಕಾಳರಕ್ಕಸಿಯುದರದಲಿ ಬೆಳಗುತಿಹೆ ನೀನು ‘ ಪಾತಕಿಗಳೊಡಲೊಳಿಹ ಪರಮಾತ್ಮನಂತೆ ! ’

ಭವದ ಬಂಧನವ ಹರಿದೊಗೆದು, ಜನನ ಮರಣಗಳ ಜಾಲದಿಂದ ಜಾರಿ, ಅಪಾರಕಾಲಸಾಗರದಲಾನಂದದಿ ತೇಲುತಿಹ ಪುಣ್ಯಾತ್ಮದಂತೆಸೆಯುತಿಹೆ ನೀನು !

ಕೋಟಿ ತಾರೆಗಳನೊಂದು ಬೀಸಿನಲಲಳಿಸಿತು ಮುಸಿಯ ಬಳಿದು-ಮೇಘರಾಶಿ.

ಆದರೇನು! ಅದರ ಗೆಲುವಿನ ಗರ್ವವನು ಮುರಿದು ಮೆರೆಯುತಿಹೆ ನೀನೆಲೆ ಮೃದುಕಾಂತಿರನ್ನ!

ಲೋಕವನೆ ಮುಳುಗಿಸಿಹ ಕತ್ತಲ ಕಡಲಲಿ ನೀ ಮಾತ್ರ ತೇಲುತಿಹೆ ತಿಳಿಹಸುರಹೂವಂತೆ!

ಗೆಳೆಯಾ, ನಿನ್ನ ನೋಡನೋಡುತ ಸೃಷ್ಟಿಕರ್ತನು ನಿಶೆಯ ನಿರ್ಮಿಸಿದ ಮರ್ಮ ತಿಳಿಯಾಗುತಿದೆಯೆನ್ನ ಮನದಲಿ.

ಕೇಳು—ನಿದ್ರೆ ವಿಶ್ರಾಂತಿಗಳಿಗಲ್ಲ! ಮಾನವನ ಕಾಮಕ್ರೀಡೆಗಳಿಗಲ್ಲ!

ದುರುಳಾತ್ಮರ ಹೊಲೆಗೆಲಸಗಳ ಮುಚ್ಚಲೆಂದಲ್ಲ!

ದುಷ್ಟಜಂತುಗಳು ಹಿಂಸಕಾರ್ಯದಲಿ ತೊಡಗಲೆಂದಲ್ಲ!—ಅಲ್ಲ!

ಕೋಟಿ ತಾರೆಗಳು ಸೋತಲ್ಲಿ ನೀನವನ ಮುದ್ದು ಮಗುವೇ ಕಾಕಿಯಾಗಿ ಗೆಲ್ವುದನು ನೋಡಲೆಂದು---

ಮೌನದಲಿ ನೀನವನ ಕೀರ್ತಿಯನು ಬೆಳಗಿ ಹಾಡುತಿರೆ ಕೇಳಲೆಂದು—

ರಚಿಸಿದನು ರಾತ್ರಿಯನೆಲೆ ಬೆಳಕಹನಿ!—ಸೊಬಗಿನ ಖಣಿ!! ಗೆದ್ದು ಮೆರೆ!—ಹಾಡಿ ನಲಿ!!!

*   *   *   *

ಮಿಣುಕುಹುಳು—ಛೆ! ಅಲ್ಲ! ಜೀವಜ್ಯೋತಿಯು ಉಲ್ಲಾಸದಲಿ ಹಿಗ್ಗಿ ಹೋಯ್ತು!

ಕತ್ತಲ ಪಟದಲಿ ಹೀಗೆ-ಹಾಗೆ ಕಾಂತಿರೇಖೆಯನೆಳೆಯುತೆಳೆಯುತ ಹಾರಿ ಹೋಯ್ತು!

ಅದು ಬಂತು—ಹೋಯ್ತು!

ಆದರದು ತಂದುದು ಮಾತ್ರ ಬೇರೂರಿತೆನ್ನೆದೆಯಲಿ.

ನಿದ್ದೆ ತೂಗುತಿದೆ ಕಣ್ಣೆವೆಯಮೇಲೆ—

ಬೆಳಕಹನಿಯ ನೆನಪ ಸವಿಯುತ ನಿದ್ದೆಯ ಮಡಿಲಿಗೆ ನುಸುಳುವೆನು!

ಆ............ಯ್!

# ೮. ಗರ್ವಭಂಗ

ಸಾಯಂಕಾಲ.

ಮಾಡಲು ಏನೂ ತೋಚದೆ ಕೈಲೊಂದು ಪುಸ್ತಕವ ಹಿಡಿದು ನನ್ನ ಕುಟೀರದ ಬಾಗಲಲಿ ಕುಳಿತೆ.

ಪುಸ್ತಕದ ಹೆಸರು "ಮಾನವನ ದಿಗ್ವಿಜಯ" ಎಂದು.

ಈ ಭೂಮಿಯ ಮೇಲೆ ಮಾನವಕುಲವು ಹುಟ್ಟಿದಂದಿನಿಂದಿದುವರೆಗೆ ಜೀವವನು ಜತನವಮಾಡಲದು ಕೈಕೊಂಡ ಹೋರಾಟಗಳ—ಉದ್ಯಮಗಳ—ಉಪಾಯಗಳ ಕ್ರಮವಾದ ಚರಿತೆ.

ಅಬ್ಬಾ—ಅದೆಂತಹ ಚರಿತೆ! ಮಹಾಚರಿತೆ!! ಅದ್ಭುತಚರಿತೆ!!!

ಪಂಚಭೂತಗಳನು ಹಿಡಿದು ಜಗ್ಗಿಸಿ, ಅವುಗಳ ಕೈಂಕರ್ಯದಲಿ ಮೆರೆಯುತಿರುವ ಧೀರಮಾನವನ ವೀರಕಥೆ!

ದುರ್ದಮ್ಯಪ್ರಕೃತಿಯ ಪ್ರಚಂಡ ಶಕ್ತಿವಾಹಿನಿಗಳನು ತಡೆಗಟ್ಟಿ ಸುಖದ ಬೆಳೆಯ ಬೆಳೆಯುತಿರುವ ದಿಟ್ಟ ನರನ ಅಟ್ಟಹಾಸ!

ಕಾಡುಮೇಡು, ಕಡಲುಗಿಡಲು, ಕತ್ತಲುಗಿತ್ತಲು, ಬೆಟ್ಟಗುಡ್ಡ, ಸಿಡಿಲು ಮಿಂಚು, ವರ್ಷಧಾರೆ, ಬಿರುಸುಗಾಳಿ, ರೋಗರುಜಿನ ಎಲ್ಲವನೂ ಮೆಟ್ಟಿ ಮುಂದರಿದ ಜಗಜಟ್ಟಿಯ ಜೈತ್ರಯಾತ್ರೆಯ ಜಯಭೇರಿ!

ನಿರ್ಭೀತಿಯಿಂದ ಭೂಗರ್ಭವನು ಭೇದಿಸಿ, ಕಡುಕೆಚ್ಚಿನಿಂದ ಕಡಲಾಳವನು ಕಲಕಿ ತಿರೆವೆಣ್ಣ ಸಿರಿಯ ಸೂರೆಗೈದ ಶೂರನರನ ಸಾಹಸಕೀರ್ತನೆ!

ಆಹಾ! ಏನಚ್ಚರಿ! ಏನದ್ಭುತ!!

ಓದುತೋದುತ ನನ್ನ ಮೈಯುಬ್ಬಿತು!

ನಾನು ಮಾನವನೆಂಬ ಭಾವನೆಯೆನ್ನೆದೆಯಲಿ ತುಂಬಿ ತುಳುಕಿತು!!

ಇತರ ಪ್ರಾಣಿವರ್ಗದಲಿ ಬೀಳದೆ, ವಿಜಯೋನ್ಮುಖ ಮಾನವ

ಶ್ರೇಣಿಯಲಿ ಹುಟ್ಟಿದೆನಲಾ—ಎಂದು ಹಿಗ್ಗಿದೆ ಪುಳಕಿತನಾಗಿ !!

ಕತ್ತಲು ಕವಿಯತೊಡಗಿತು ; ಪುಸ್ತಕವೂ ಮುಗಿದಿತ್ತು.

ಅದನು ಮುಚ್ಚಿ ಹಾಗೆಯೇ ಹೆಮ್ಮೆಯಿಂದ ಯೋಚನೆಯ ಮೆಲಕು ಹಾಕತೊಡಗಿದೆ.

ನಮ್ಮ ಈ ದಿಗ್ವಿಜಯಕೆಣೆಯುಂಟೆ !—ತಡೆಯುಂಟೆ !! – ಕೊನೆಯುಂಟೆ !!!—ಎಂದಚ್ಚರಿಯಲಿ ಮೈಮರೆತು ಮುಳುಗಿದೆ.

* * * *

ನನ್ನ ದಿಟ್ಟಿ ಹಾಗೆ ಹೀಗೆ ಹರಿಯತೊಡಗಿ, ದೂರದ ಕಾಳನೀಲ ಪಟದಿ ಮಿನುಮಿನುಗಿ ಮೆರೆಯುತಿಹ ಅಗಣಿತ ತಾರೆಗಳಲೊಂದರ ಮೇಲೆ ನಿಂತಿತು.

ಅದರ ನೀಳದಿಟ್ಟಿಯೆನ್ನೆದೆಯ ಹೊಕ್ಕಿತು

ಆ ದೂರದಿಂದದು ಮೌನವಾಗೆನ್ನ ಹೆಮ್ಮೆಯ ಯೋಚನೆಯ ನಾಲಿಸಿದಂತೆ ತೋರಿತು.

ಕೊನೆಗೆ,—

" ಅಹಾ ಏನು ಮಹಾದಿಗ್ವಿಜಯವೋ ! "

—ಎಂದು ಕಿಲಕಿಲನೆ ನಕ್ಕಿತು ಪರಿಹಾಸದಲಿ.

" ಏ–ನು–ಮ–ಹಾ–ದಿ–ಗ್ವಿ–ಜ–ಯ ! "

ಅದ ಕೇಳಿ ಸ್ತಂಭಿತನಾದೆ ಶಿಲೆಯಂತೆ !

ಶೀತಲವಾಯ್ತೆನ್ನೆದೆ ನೀರ್ಗಡ್ಡೆಯಂತೆ !

ಇಂತು ಹೇಳಿತು ತಾರೆ :

" ಎಲವೋ ಅಣುಮಾನವಾ !—ಯಾವ ಮಹಾದಿಗ್ವಿಜಯಕಾಗಿ ಹಿಗ್ಗುವೆ ? ಏನ ಸಾಧಿಸಿದ ಸೊಕ್ಕಿದು ?

ಕೇಳು !—ಕೇಳ !—ನನ್ನ ಕೋಟಿಪಾಲಿನಲೊಂದು ಪಾಲಿಗೂ ಕಿರಿಯನು ನಿನ್ನಾ ಸೂರ್ಯ !

ಅವನು ಮೈಕೊಡವೆ ಹಾರಿದೊಂದಣು ನಿನ್ನಾ ನೆಲ !

ಆ ಮಣ್ಣುಮುದ್ದೆಯಲಿ ನೀನಿರುವ ಕುಟೀರವೆಷ್ಟು ?—ಆ ಕುಟೀರದಲಿ ನಿನ್ನ ತಾವೆಷ್ಟು !

ಸೃಷ್ಟಿಯಲಿ ಅಣುವಿನಣುವಿನ ವೈಯು ಧೂಳಿನಲೊಂದು ಕಣದ ಕಣ ನೀನು!

ನಿನ್ನ ಜೀವಿತಕಾಲದಳತೆಯು ಬಲ್ಲೆಯಾ ಕ್ರಿಮಿಗಾತ್ರಾ?

ಅನಂತ ಕಾಲದಲೊಂದು ಸಲ ಎವೆಯಿಕ್ಕಿದಂತೆ—

ಚಿರಕಾಲವಾಹಿನಿಯಲಿ ಕ್ಷಣಕೊಂದು ಸಲ ಮೂಡಿ ಒಡೆಯುವ ನೀರ್ಗುಳ್ಳೆಯಂತೆ—ನಿನ್ನ ನೂರು ವರುಷದ ಬಾಳು!—ಎಲೆ ಮಾನವಾ!

ತೀರಗೀರಗಳಿಲ್ಲದ ಜೀವಸಾಗರದಲೊಂದು ಹನಿ ನೀನು!

ನಿನಗೇಕಿನಿತು ಗರ್ವ!

ನೀನು, ನಿನ್ನಾ ನೆಲ, ಆ ಸೂರ್ಯ—ನಾನು, ನನಗೆ ಮೀರಿದ ಕೋಟಿ ಕೋಟಿ ತಾರೆಗಳು—ಎಲ್ಲರೂ ಒಬ್ಬನ ಲೀಲಾಸಾಮಗ್ರಿಗಳೋ!

ಅವನ ಮಹಾಸಂಕಲ್ಪದಿವ್ಯಕಾವ್ಯದಲಿ ನೀನು ನಾನೆಲ್ಲ ಬರಿಯಕ್ಷರಗಳು!

ಕೇಳು, ಅಣುವಿನೊಳಗಡಗಿದ್ದೂ ನುಂಗಿರುವನವನು ಅನಂತ ಕೋಟಿ ಬ್ರಹ್ಮಾಂಡಗಳ!

ಅವನ ನೆನೆ; ಆತ್ಮಕಡೆ ಮೊಗಮಾಡು; ಅವನ ತಿಳಿ!

ಅದೆ ಮಹಾದಿಗ್ವಿಜಯ—ಸತ್ಯವಾಗಿ!

ಅದಕೆಣೆಯಿಲ್ಲ!—ತಡೆಯಿಲ್ಲ!!—ಕೊನೆಯಿಲ್ಲ"!!!

ತಾರೆಯಿಂತು ಬಿಡಿಬಿಡಿಸಿ ಒತ್ತಿಹೇಳಿ ಹೆಮ್ಮೆಯಡಗಿತೆನ್ನೆದೆಯ.

ಅಯ್ಯೋ, ಮಾನವಾ!—ಎನಿಸಿತು.

* * * * *

ಮರತೆ!—ಒಂದು ವಿಷಯ ಹೇಳುವುದ.

ನಾನೋದಿದ ಪುಸ್ತಕದಲಿ ಆ ಮಹಾಲೀಲಾಲೋಲನ ಹೆಸರ ಸುಳಿವಿಲ್ಲ!

ಅದು "ಮಾನವನ ದಿಗ್ವಿಜಯ" ಎಷ್ಟಾದರೂ!

## ೯. ರನ್ನಗನ್ನಡಿ

ಇಹಲೋಕದಪ್ಸರಿಯಂತೆಸೆದಂಗನೆಯೊರ್ವಳು ಸಿಂಗರಿಸಿಕೊಳ್ಳುವ ಕಣಿಯಾಗಿರ್ದಳು ತನ್ನೇಕಾಂತದ ಕಿರುಮನೆಯಲಿ.

ಎದುರಿನಲಿ ಕೈಗನ್ನಡಿ. ಪಕ್ಕದಲಿ, ದಂತದ ಬಾಚಣಿಗೆ— ಪರಿಮಳಿತ ಕುಂತಳ ತೈಲ-ಕುಂಕುಮ-ಕಾಡಿಗೆ-ಕಸ್ತೂರಿ-ಅತ್ತರು- ಅಲಕತಕ-ತರತರದ ಆಭರಣ ಮೊದಲಾದ ಸಿಂಗರದ ವಸ್ತುಗಳಿಂದಿಡಿದ ಕೆತ್ತನೆ ಕೆಲಸದ ಗಂಧದ ಪೆಟ್ಟಿಗೆ—ಬೆಳ್ಳಿಯ ಬುಟ್ಟಿಯಲಿ ಮುಗಮುಗಿಪ ಹೊಸಮುಂಡುಮಲ್ಲಿಗೆಯ ಹೂಮಾಲೆ, ಎಲ್ಲ ಕಾದಿರ್ದುವಲ್ಲಿ ತಳೋದ ರಿಯ ತನುವ ಸೋಂಕ ಬಯಸಿ.

ಸುಂದರಿಯು ನಿಜ ನೀಲಕುಂತಳರಾಶಿಗೆ ಪರಿಮಳದ ತೈಲವ ಹಚ್ಚಿ ದಂತದ ಬಾಚಣಿಗೆಯಿಂದ ಬಾಚಿದಳು.

ಸೌಭಾಗ್ಯಲಕ್ಷ್ಮಿಯ ಮೃದುಚರಣ ಸೋಂಕಿನಿಂದಾದ ದಾರಿಯೆನೆ ಸೊಬಗಿನ ಬೈತಲೆಯ ಬಿಡಿಸಿದಳು.

ಕಾಳಸರ್ಪವ ಹೋಲಿಪಂತೆ ಸಿರಿಮುಡಿಯ ಜಡೆಹೆಣೆದು ಮಾಂಗಲ್ಯನಿಧಿಯಂತೆಸೆಯೆ ಕಬರಿಯನು ರಚಿಸಿದಳು.

ಪನ್ನೀರಿನಲಿ ತೊಳೆದಿಂದುವದನವನು ಮುಕುರದಲದರ ಬಿಂಬ ವನು ನೋಡುತ್ತೆ ತಿದ್ದಿದಳುಗುರ್ಗೊನೆಯಿಂದೆ ಹುಬ್ಬುಗಳ, ಮುಂದ ಲೆಯ, ಪನ್ನೆಕೂದಲ .

ಕಿರುವೆರಳುಗುರತುದಿಯಿಂದೆ ಕಂಗಳಿಗೆ ಕಂಪುಕಾಡಿಗೆಯ ಲೇಪಿಸಿ, ದುಂಡು ಕದಪುಗಳ ಮೇಲೆ ಕಸ್ತೂರಿಯ ಬೊಟ್ಟನಿರಿಸಿದಳು ಮಿಾನಲೋಚನೆ.

ನಳಿತೋಳು—ಸಿರಿಗೊರಳು—ತುಂಬಿದೆದೆಗೆಲ್ಲ ಅತ್ತರನು ಪೂಸಿ, ಬೈತಲೆಗು ಕರತಲಕು ಪದತಲಕು ತಿಳಿಯಾಗಿ ಸವರಿದಳಲಕತವನು, ನಿಜಸಿಂಗರದಿ ತಲ್ಲೀನಳಾಗಿ.

ಬಳಿಕ ರೂಪಸಿ ಸರಿಗೆಯಂಚಿನ, ಬೆಳ್ಳಿಹೂವಿನ ನವಿಲುಬಣ್ಣದ ಸೀರೆಯನು ನಿರಿಹಿಡಿದುಟ್ಟು, ಕಟ್ಟಿದಳು ಕಿತ್ತಿಳೆರಂಗಿನ ಕಂಚುಕವ ಬಿಗಿದು.

ಧರಿಸಿ ಕಂಠದಲಿ ಕೆಂಪುಪದಕದ ಮುಕ್ತಹಾರವ, ಸುತ್ತಿದಳು ಸುಮಮಾಲೆಯನು ಕಳೆಯೇರೆ ಕಬರಿಗೆ.

ಇಂತುಚಿತಸಿಂಗರದಿ ಲತಾಂಗಿಯ ಲಾವಣ್ಯವಿಮ್ಮಡಿಸೆ, ಅಂಗ ಜನ ಅರಸಿಯಂತೆಸೆದಾಕೆ ಕೈಗನ್ನಡಿಯ ಕೊಂಡು, ಕೊರಳನಂತಿಂತು ಬಳುಕಿಸುತ, ಅರೆನೋಟ–ಬಿರುನೋಟ–ಕುಡಿನೋಟವೆದುರ್ನೋಟ ಗಳಿಂದೆ ನುಂಗಿದಳು ಪ್ರತಿಬಿಂಬಿತ ನಿಜಮೊಗದ ರೂಪದೈಸಿರಿಯನು.

ತಳಿರ್ವೆರಳುಗಳಿಂದ ಹಗುರಾಗಿ ಹೆರಳ ಸವರಿ ನೋಡುತ, ಎಡ ಬಲಕೆ–ಹಿಂದೆ ಮುಂದಕೆ ಲತೆಯಂತೆ ತೂಗಿ ಜೋಕಿನಲಿ, ಸಿರಿಯ ನೊಂದುಸಲ ಉಂಗುಟದಿ ಚಿಮ್ಮಿ, ತುದಿಸೆರಗ ಹಿಡಿದು ತೋಳೆತ್ತಿ, ವಸ್ತ್ರಾ ಭರಣಗಳ ವೈಖರಿಯ ಸಾವಧಾನದಿ ಪರಿಕಿಸಿದುದಾಯ್ತು.

ಎಲ್ಲ ಮುಗಿದಿನ್ನುಳಿದುದೀ ರೂಪಭಂಡಾರಕೆ ಮುದ್ರೆಯೆನೆ, ಬಾಲೇಂದು ಫಾಲಕೆ ಕಣ್ಸೆಳೆವ ಕುಂಕುಮದ ಬೊಟ್ಟೊಂದು.

ಅತ್ತರಿನಲಂಗನೆಯು ಕುಂಕುಮವ ತೇಯ್ದುದಕೆ ಕತ್ತುರಿಯ ಸೋಂಕಿ, ಬೆರಳತುದಿಯಲದನಣಿಯಾಗಿ ತೆಗೆದೊಟ್ಟುಗೂಡಿಸಿದಳು.

ಕನ್ನಡಿಯ ನೋಡುತ ನಿಟಿಲದಲಿ ಬೊಟ್ಟನಿಡುವನಿತರಲೆ, ಕಂಡಳು ಸದ್ದಿನಿತಿಲ್ಲದೆ ಬಂದು ಬೆನ್ನಲಿ ನಿಂತು ಹೊಂಚುತಿರ್ದಿನಿಯ ನನು.

ರಮಣಿ ತಿರುಗುವ ಮುನ್ನ ರಸಿಕ ಬಲುಬೇಗ ನಾರಿಯ ಕಂಗಳ ಮುಚ್ಚೆ, ತರಳೆ ನುಲಿನುಲಿದು ಬಿಡಿಸಿಕೊಂಬಾಟದಲಿ ಕೈಜಾರಿ ಬಿದ್ದೊ ಡೆದು ಪುಡಿಪುಡಿಯಾಯ್ತು ದರ್ಪಣವು!

ಇಷ್ಟಾದರೂ ಕೈತೆಗೆಯದಿಸಿಯನು, ಕುಂಕುಮವ ಬಳಿವೆನೆಂದಂಗ ನೆಯು ಹೆದರಿಸೆ ತೆಗೆದನಾಗ ನಗುವನುಕ್ಕಿಸುತ.

ತಿರುಗಿದಳು ತಳೋದರಿಯು ಕೆಣಕಿದ ಸಿಂಹಿಯವೊಲಂಬಕದಿ ಮರಿಮಿಂಚ ಝಳಪಿಸುತ!

ಔಡುಗಚ್ಚಿದಳು ಹುಸಿಗೋಪದಲಿ!

ಹುಬ್ಬುಗಳು ಗಂಟಿನಲಿ ಒಂದಾಗೆ ಇಮ್ಮಡಿಸಿತವಳ ಲಾವಣ್ಯಸಿರಿ.

ಬೆಳಗುತಿರೆ ಹುಸಿಮುನಿಸ ಮಿಂಚಿನಲಿ ಕೂರ್ತಮಡದಿಯ ಮೊಗ ಬಾಯಾಯ್ತು ಪ್ರಿಯನ ನಯನಗಳು.

ಭಯಮಿಳಿತ ಪ್ರೇಮದಲಿ ಕಂಪಿಸುತ, ಅಬಲೆಯಂಗವ ಸೋಂಕಿ ನಿಂತು ಇಂತುಸುರಿದನು ಅಪರಾಧಿಯತಿ ದೈನ್ಯದಲಾಗ:

"ಆಹಾ! ಮನ್ನಿಸು, ಮನ್ನಿಸೆನ್ನ ಮನದನ್ನೆ! ನಾನಾತುರದಿಂ ದೆಸಗಿದಪರಾಧವನು.

ತಾಳಲಾರದೆ ಹೋಯ್ತು ಮನ—ರನ್ನೆ!

ನಿನ್ನೊಲವಿನಾ ಕನ್ನಡಿಯು ಪುಡಿಯಾಯ್ತೇ!

ಇದಕೆ ನೀಯೇನು ಶಿಕ್ಷೆಯ ಕೊಟ್ಟರೆನಗದೆ ಹಸಾದವು!"

ಪ್ರಿಯನ ದೀನತೆಯ ಕಂಡೊಡನೆ ಮಾಯವಾಯ್ತಂಗನೆಯ ಮೊಗದಿಂದ ಹುಸಿಗೋಪ; ಮೂಡಿದುದಲ್ಲಿ ನಗೆದಿಂಗಳು.

ಸಂತವಿಸಿ ಮೆಲುದನಿಯಲಿಂತುಸುರಿದಳು ಲತಾಂಗಿ ಪತಿಯಂಗಕೆ ಒಲವಲತೆಯಾಗಿ:

"ಬಿಡು ರಮಣಾ, ಏನಾಯ್ತು!

ದರ್ಪಣದಿ ನಾ ನಿನ್ನ ಮುನ್ನಮೇ ಕಂಡೆ ಎನ್ನ ಮನದನ್ನ!

ನಲ್ಲನಿನ್ನೂ ಸುಮ್ಮನಿರುವನಲ್ಲಾ—ಎಂಬ ನಿಜದ ಮುನಿಸು ಹುಸಿಯಾಯ್ತೆನ್ನಂಬಕಗಳ ನೀ ಮುಚ್ಚಿದ ಚಣದಲಿ!—ಇದ ನೀನು ಕಾಣೆಯಾ ಎನ್ನಿನಿಯ!

ಅದು ಹೋದರೇನಂತೆ!

ಜೀವವಿಲ್ಲದ ಕನ್ನಡಿ ಅದಕೆ ಬೆಲೆಯಲ್ಪವು.

ನೋಡಿಲ್ಲಿ, ನನ್ನ ಜೀವಗನ್ನಡಿ ನೀನಿರಲು ರನ್ನಗನ್ನಡಿಯಾಗಿ, ಕೊರತೆಯೇನೆನಗೆ ಪ್ರಿಯ?

ನೀಯೆನ್ನ ಮೊಗದಿ ನೆಡು ದಿಟ್ಟಿಯನು! ನಿನ್ನ ಕಣ್ಗಳಲೊಂದ ಕೆರಡು ಕಾಂಬುದು ನಿನ್ನರಸಿಯಾನನವು!—ಎಲ್ಲಿ?"

ಇಂತೆನುತವನ ಗಲ್ಲವನು ವಾಮಕರಪದ್ಮದಲಿ ಪಿಡಿದವನ ನಯನ

ಗಳಾಳದಲಿ ನಿಜಮೊಗದ ಬಿಂಬವನು ನಟ್ಟನೋಟದಿ ನೋಡುತ,

"ಅಲುಗದಿರು!—ಅಲುಗದಿರು! ಎನ್ನೆದೆಯ ವಲ್ಲಭಾ!!-ಕುಂಕುಮದ ಬೊಟ್ಟು ಕೆಟ್ಟೀತು!

ಅಯ್ಯೋ! .......ಏನ ಮಾಡಲಿ ಎವೆಯಿಡುವೆಯಲ್ಲ!

ಏನಾಟ? ಒಂದು ಚಣ ಸುಮ್ಮನಿರಬಾರದೇ ಎನ್ನ ದೊರೆ!

ಏನವಸರವೀಗಲೆ?........ಕಡೆಯಲ್ಲಿ ನಗಬಹುದು ಈರ್ವರೂ ಒಂದಾಗಿ!

ಸುಮ್ಮನಿರು ಸುಂದರಾ!........ಇಲ್ಲಿ ನೋಡಿಲ್ಲೆನ್ನ ಕಣ್ತುಂಬ ಮನದನ್ನ!"

ಎಂದೆನುತಲಿಂದುಮುಖಿ, ತನ್ನರಸನಂಬಕದಿ ಸಿರಿಮೊಗದ ಬಿಂಬವನು ನೋಡನೋಡುತ, ಬಾಲಶಶಿನಿಟಿಲದಲಿರಿಸಿದಳು ಕುಂಕುಮದ ಬೊಟ್ಟ ಕಾಂತನ ಕಣ್ಸೆಳೆಯುವಂತೆ.

ಪೂರ್ಣವಾಯ್ತುಂಗನೆಯ ಶೃಂಗಾರ ಪೂರ್ಣೇಂದುವಂತೆ.

ಸತಿಯ ಮೊಗಜೊನ್ನಕೆ ಪತಿ ಸೋತನು ಚಕೋರದಂತೆ.

ನೋಟ-ಬೇಟಕೆ, ಮಾತುಮಾತಿಗೆ ಮುತ್ತಿನ ಮಳೆಗರೆಯುತ ಮೆರೆದರು ಸತಿಪತಿಗಳಾಮೋದದಲಿ.

# ೧೦. ಅಲಂಕಾರ—ಅರ್ಥ

ಒಂದು ದಿನ ಉದಯದಲಿ ನಾನೊಬ್ಬನೇ ನಿಂತಿದ್ದೆ ತಿರೆಯ ತುತ್ತತುದಿಯಲಿ.

ಬೆನ್ನಹಿಂದೆ—ಅತ್ಯದ್ಭುತ ಗಿರಿವನಮಾಲೆಗಳಿಗೆ, ಕೋಟಿಕೋಟಿ ಜೀವರಾಶಿಗಳಿಗೆ ನೆಲೆಯಾದ ಭೂವಿಸ್ತಾರ!

ಕಣ್ಣಮುಂದೆ—ನಿರರ್ಗಳ ತರಂಗನಿರ್ಘೋಷದಿಂದ ದಶದಿಕ್ಕುಗಳ ತುಂಬುತಿಹ ಮಹೋದಧಿಯ ಅಪಾರ ಜಲವಿಸ್ತಾರ!

ತಲೆಯ ಮೇಲೆ—ಈ ಭೂ-ಜಲವಿಸ್ತಾರಗಳ ಕಿರಿದುಗೈದ ಅನಂತ ನೀಲಗಗನ ವಿಸ್ತಾರ!

*　　*　　*　　*

ಒಂದುಬಾರಿ ನೆಲವ ನೋಡಿದೆ;
ಒಂದುಬಾರಿ ಜಲವ ನೋಡಿದೆ;
ಒಂದುಬಾರಿ, ಮೊಗವೆತ್ತಿ ಕಣ್ಣಿನಿಂದ ನಭವನಳೆದೆ!
ಇನಿತು ನೋಡಿ, ಒಂದುಬಾರಿ ನನ್ನನೇ ನಾ ನೋಡಿಕೊಂಡೆ.
ಇಂಥ ಮಹಾವಸ್ತುಗಳ ಮಧ್ಯದಲಿ ನಾನೊಂದು ಕಣವಾಗಿ ಕಂಡೆ!
ಆಹಾ! ಏನು ದೈನ್ಯತೆ—ಮಾನವನದು!—ಎನಿಸಿತು.

*　　*　　*　　*

ಕರುಳನಿರಿವ ಕಿರಿಯತನದೀ ಭಾವನೆಯ ಸಹಿಸಲಾರದೆ ಮುಚ್ಚಿಕೊಂಡೆ ಕಣ್ಣ.

ಏನು ಸೋಜಿಗ!—ಏನು ಮಾಯ!!

ಕಣ್ಣಮುಚ್ಚಿದ ಚಣದಲಿ ಮನವು ಬಿಚ್ಚತೊಡಗಿತು.

ಬಿಚ್ಚಿತೋ!-ಹಿಗ್ಗಿತೋ!-ಅರಳಿತೋ!-ಬೆಳೆಬೆಳೆದು ಹಬ್ಬಿತೋ!
—ತಡೆಯೆಂಬುದ ಕಾಣದಲೆ!

ನೆಲ-ಜಲ-ಗಗನಗಳ ನುಂಗಿತು ಒಂದೇ ತುತ್ತಿನಲಿ!

*　　*　　*　　*

ಕಣ್ಣು ಬಿಟ್ಟೆ!

ಪುನಃ ನೋಡಿದೆ ನೆಲ—ಜಲ—ಗಗನಗಳ ವಿಸ್ತಾರವನು.

ಪುನಃ ನೋಡಿಕೊಂಡೆ ನನ್ನನು ನಾನೇ!

ಅಪಾರ-ಅಗಾಧ—ಅನಂತಗಳ ಮಧ್ಯದಲೊಂದು ಅಣು!

ಈ ಅಣುವಿನೆದೆಯಲಿ ಆ ಅಪಾರ—ಅಗಾಧ—ಅನಂತಗಳನು ಗುಟುಕರೊಂದರಲೆ ಆಪೋಶನಂಗೈದ ಮನ.

ಏನಿದಚ್ಚರಿ!

ಈ ಅಚ್ಚರಿಯಲಿ ಅಡಗಿಹೋಯ್ತು ಕಿರಿಯನೆಂಬ ದೈನ್ಯಭಾವ.

*        *        *        *

ಸೂಜಿಯ ಕಣ್ಣಲಿ ಆನೆಯ ತೂರಿಸಬಲ್ಲನು ಜಗದೊಡೆಯ— ಎಂಬ ಹಿರಿಯರ ಮಾತ ಕೇಳಿದ್ದೆ ಬಾಲ್ಯದಲಿ.

ಅಂದು ಆ ಮಾತು ನನ್ನ ಬುದ್ಧಿಯ ಗಂಟಲಲಿ ಇಳಿಯದ ಕವಳವಾಗಿತ್ತು.

ಇಂದು ವ್ಯಕ್ತವಾಯಿತು ಅಂದು ಅವರಾಡಿದಾ ಚೆಂದದ ಮಾತಿನ ಅಲಂಕಾರದ ಅರ್ಥ!

# ೧೧. ವನಸುಮ

ದಟ್ಟಡವಿಯಲಿ ನಾನೊಂದು ದಿನ ಗೊತ್ತುಗುರಿಯಿಲ್ಲದಲೆಯು ತಿರೆ— ಕಂಡೆ ಕಾಡುಕುಸುಮವೊಂದನು.

ಕುಸುಮವನು ಕಂಡೊಡನೆ ಗುರಿ ಇದೇ-ಎಂದರಿತು ಮುಂದರಿಯದಾದುವೆನ್ನ ಕಾಲ್ಗಳು.

ಆ ಬನದಲರೆಸಳ ಬಲೆಯಲಿ ಸೆರೆಯಾದುವೆನ್ನ ಮನ-ಕಣ್ಮನಗಳು.

ಅದರ ಚೆಲುವಿಗೆ ಸೋತೆ.

ಕುಯ್ದುಕೊಳಲದರ ಬಳಿಗೆ ಕೈಯ ಚಾಚಿದೆ.

ಅನಿತರಲೆ ಅದರ ಕೋಮಲಕಾಯಕೆ ಕರಗಿ ಹಿಂದಕೆಳೆದೆ ಕೈಯ —ಕುಯ್ಯದಲೆ.

" ಕುಯ್ದುಕೋ !-ಎತ್ತಿಕೋ !!-ಮುತ್ತಿಟ್ಟು ಒತ್ತಿಕೋಯೆನ್ನ ನಿನ್ನೆದೆಗೆ-ಎಲೆ ಪಾಂಥ !!! "

—ಎಂದು ಕಾತರದಿ ಹಾತೊರೆಯಿತು ಹೆಸರಿಲ್ಲದಾ ಹೂವು.

" ಒಲ್ಲೊಲ್ಲೆ! ಎಲೆ ಚೆಲುವೆ-ಕೋಮಲೆ !-ನನ್ನ ಕೈಯಾರ ನಿನ್ನ ಕೊಲಲಾರೆ ! "

—ಎಂದು ನುಡಿದೆನು ಮೃದುವಾಗಿ.

" ಹಾಗೆನ್ನದಿರು ಎಲೆ ಕರುಣಾಕರ !

ದಿನ ದಿನವು ಹುಟ್ಟುತಿಹೆ-ಸಾಯುತಿಹೆ !

ಸಾವು ಹುಟ್ಟಿನ ಬೆನ್ನು ! ಅದರ ಭಯವೆನಗೆ ಎಳ್ಳನಿತು ಇಲ್ಲ ಬಂಧುವೇ !

ಎನಗಿರುವುದೊಂದೇ !—ನೋವು !

ಎನ್ನೀ ಹುಟ್ಟು ಸಾವುಗಳಂತರವ ತುಂಬಿರುವ ನೀರಸದ ಜೀವನದ ನುಂಗಲಾರದ ನೋವು !

ಅನುದಿನವು ಆದರಿಂದ ಬಿರಿಯುತಿದೆ-ಹರಿದು ಚೂರಾಗುತಿದೆ ಎನ್ನೀ ಒಡಲು!

ಹಾ! ಕಾಯ್ದು, ಕಾಯ್ದು, ಕಾಯ್ದು ಬೆಂದಿಹೆನು—ಬಳಲಿಹೆನು!"

"ಆಹಾ!—ಕಾಯ್ದೆಯಾ?-ಯಾರಿಗಾಗಿ ಕೋಮಲಕಾಯೇ?"

"ನಿನಗಾಗಿ!—ನಿನಗಾಗಿ!!—ಎಲೆ ಪಾಂಥ, ನಿನಗಾಗಿ! ಪಾಂಥರೆನಿಬರೊ ಬಂದರು, ಎನಿಬರೋ ಹೋದರೀ ದಾರಿಯಲಿ ಆದರೇನು! ನಿಲಲಿಲ್ಲ ಒರ್ವನೂ ನೋಡಲಿಲ್ಲ ಕೇಳಲಿಲ್ಲ! ನೀನಿಂದು ನಿಂತು—ನೋಡಿ—ಕೇಳಿ ಕೆರಳಿಸಿಹೆ ಎನ್ನಾಸೆಯನು!

ಓ ಸಖನೆ, ಸುಖದಾಯಕನೆ! ಬಯಲುಮಾಡದಿರೆನ್ನೆದೆಯ ಬಯಕೆಯನು!"

*　　*　　*　　*

ಬಾಗಿ, ಆ ಕಾಡು ಕುಸುಮವನು ಕೊಯ್ದೆತ್ತಿ—ಕಣ್ಮುಚ್ಚಿ—ಮುತ್ತಿಟ್ಟು ಎದೆಗಪ್ಪಿಕೊಂಡೆ.

ಆಹಾ! ಕ್ಷಣದಲಿ ಬಾಡಿತಾ ಕುಸುಮ!

ಒಡನೆ ಬಿಡುಗಡೆಯು ಹೊಂದಿ ಹೊರಹೊಮ್ಮಿದಂತಾಯ್ತು ಹೂವೊಡಲಾಸೆ ಮಧುರತರ ಮೌನಗಾನವಾಗಿ!

# ೧೨. ಸೇತುವೆಯ ಮೇಲೆ

ಸೇತುವೆಯುಮೇಲೆ ನಿಂತಿದ್ದೆನೊಂದು ದಿನ.

ಅವಿರಾಮ ಗತಿಯಿಂದೆ ಹರಿಯುತಿತ್ತು ವಾಹಿನಿಯು ತಳದಲ್ಲಿ.

ಸೇತುವೆಯ ಮೇಲೆ ಅತ್ತಲಿಂದಿತ್ತ, ಇತ್ತಲಿಂದತ್ತ ಹೋಗುತಿದ್ದರು ಮಂದಿ—ಹೋಗುತಿದ್ದರು—ಹೋಗುತಿದ್ದರು :

ಗಂಡಸರು-ಹೆಂಗಸರು-ಮಕ್ಕಳು ಮರಿಗಳು ;

ಯುವಕ-ಯುವತಿಯರು—ವೃದ್ಧವೃದ್ಧೆಯರು ;

ಧನಿಕರು-ದರಿದ್ರರು, ಸುರೂಪಿಗಳು—ಕುರೂಪಿಗಳು ;

ಕೆಲರವಸರವಸರವಾಗಿ—ಕೆಲರತಿ ನಿದಾನದಲಿ,

ನಗುತ ನಲಿಯುತೆ ಕೆಲರು—ಅಳುತ ಗೋಳಿಡುತೆ ಕೆಲರು, —ಹೋಗುತಿದ್ದರಾ ಸೇತುವೆಯ ಮೇಲೆ ತಡಿಯಿಂದ ತಡಿಗೆ.

ದಡದಿಂದ ದಡಕೆ ದಾಂಟಿಸುವ ಆ ಸೇತುವೆಯ ಮೇಲೆ ನಿಂತು ನೋಡುತಿದ್ದೆ ನಾನಿದನೆಲ್ಲ.

ಕಾಲವೆಂಬುದೆ ಕರಗಿ ನೀರಾಯ್ತೊ ಎಂಬಂತೆ, ಕೆಳಗೆ ಉರುಳುರುಳಿ ತೆರಳುತಿತ್ತು—ಅನಂತ ಮಂಜುಳಗಾನದಲಿ—ತಿಳಿನೀರವಾಹಿನಿ.

*　　*　　*　　*

ಸೇತುವೆಯ ಆಚೆ ತುದಿಯಿಂದ ಗುಂಪೊಂದು ಹೆಣವ ಹೊತ್ತು ತರುತಿತ್ತು.

ಹತ್ತಿರಕೆ ಬಂದಿತು; ನೋಡಿದೆನು ಅಯ್ಯೋ! ಹರೆಯದವನ ಹೆಣ.

ಹಂಬಲಿಸುತಿಹ ಬೆಂದ ಬಸಿರ ಮುದಿತಾಯಿ ;

ತುಂಬಿದಳಲಿನಲಿ ಗೋಳಿಡುತಿರುವ ಮುದಿತಂದೆ ;

ಬಾಳನೂಲು ಬದುಕ ಬೆಳಗಿನಲೆ ಹರಿದುಹೋಗೆ, ವಿಯೋಗದನಲಿಗಾಹುತಿಯಾದ ಬಾಲಸತಿ,

ಮರುಮರುಗಿ ಮೌನದ ಭಾರದಲಿ ಬಾಗಿರ್ದ ಬಂಧುಮಿತ್ರರು—

—ಇವರಾ ಹರೆಯದನ ಕಡೆಯ ಪಯಣದ ಪರಿವಾರ. ಗೋಳಿನ ಗುಂಪು ಸಾಗಿತು ಮುಂದೆ.

— ನಾನಲ್ಲೆ ನಿಂತು ನೋಡುತಿದ್ದೆ.

ದೂರದ ದಹನಸೋಪಾನದಲಿ ಆ ಹರೆಯದವನ ಹೆಣವು ಬೂದಿಯಾಯ್ತು ಧಗಧಗಿಸುವ ಜ್ವಾಲೆಯ ಜಿಹ್ವೆಗೆ ತುತ್ತಾಗಿ !

—ಅಲ್ಲೆ ನಿಂತು ಯೋಚಿಸಿದೆ ನಾನಿಂತು:

ಜೀವನದ ಸಂಜೆಯನು ಸಾರಿದ್ದ ಆ ತಾಯಿತಂದೆಗಳ ಗೋಳೆನಿತು!

ಹೊಸಬದುಕಿನ ಮುಂಬೆಳಕಿನಲದೆತಾನೆ ಕಣ್ಣುಬಿಡುತಲಿದ್ದ ಆ ಬಾಲ ವಿಧವೆಯು ಮುಳುಗಿದ ಕಗ್ಗತ್ತಲ ಕಡಲಾಳವೆನಿತು !

ಅಳೆಯಲಳವೇ ?

ಹೆಣವ ನುಂಗಿದಾ ಜ್ವಾಲೆಯ ಮರುಬಿಂಬವೆನೆ ಎದ್ದಿತೊಂದು ಜ್ವಾಲೆಯೆನ್ನೆದೆಯಲಿ.

“ ಏನು ಅವಸರವಿತ್ತೋ—ವಿಧಿಗೆ !—ಅಯ್ಯೋ ! ”

—ಎಂದಬ್ಬರಿಸಿದೆನಂದು ಮೌನದಲಾ ಸೇತುವೆಯಮೇಲೆ ನಿಂತು.

ಅಬ್ಬರವಡಗುವುದರಲೇ ಸೇತುವೆಯ ಈಚೆ ತುದಿಯಿಂದ ಬಂತೊಂದು ಮೆರವಣಿಗೆ !

ಗಂಡು ಹೆಣ್ಣಿನ ಮೆರವಣಿಗೆ !

ಎರಡು ಬಾಳ ನೂಲುಗಳಲಿ ಹುರಿಯೊಂದ ಹೊಸೆದಂತೆ ಎಸೆದಾ ಮೆರವಣಿಗೆಯ ವೈಭವವೇನು !

ಮಂಗಳವಾದ್ಯಗಳೇನು !

ತರತರದಿ ಸಿಂಗರಿಸಿಕೊಂಡು ನಳನಳಿಸುತ ನಡೆದ ಬಂಧುಬಳಗದ ಪರಿವಾರವೇನು !

ಸಿಂಗರಿಸಿದ ವಾಹನದಲಿ ಬಲುಬಿಗುಮಾನದಿ ಕುಳಿತ ವರನ ಠೀವಿಯೇನು !

ಲಜ್ಜೆಯ ಭರದಲಿ ತಲೆಬಾಗಿ ಕುಳಿತ ವಧುವಿನ ಲಾವಣ್ಯವೇನು !

ಗುಂಪಿಗೆ ಗುಂಪೇ ಆನಂದದಲೆಗಳ ಮೇಲೆ ತೇಲಿ ಸಾಗುತಿದ್ದಿತು ಮಹಾಸಂಭ್ರಮದಲಿ.

ಸಾಗಿತು ಮುಂದಕೆ—ಮೆರವಣಿಗೆ.

*　　*　　*　　*

ಅತ್ತಕಡೆಯಿಂದ ಒಡೆದು ಬಂತು ಮುತ್ತಿನಂಥ ಬಾಳೊಂದು—ದುಃಖದ ವಿಷವಾಹಿನಿಯಲಿ ಮುಳುಗಿ!

ಇತ್ತಕಡೆಯಿಂದ ಒಂದಾಗಿ ಬಂತು ಚಿನ್ನದಂಥ ಬಾಳೆರಡು—ಸುಖದ ಜೇನ ಹೊಳೆಯಲಿ ತೇಲಿ!

ಒಂದೆ ಹೊತ್ತಿನಲಿ ನಾನಿದನು ನೋಡಿದೆನು

—ಆ ಸೇತುವೆಯ ಮೇಲೆ ನಿಂತು.

# ೧೩. ತಾಯಿ ಕಂಪಿಸಿದಳು !

[ಕ್ರಿ. ಶ. ೧೯೩೩ ನೇ ಜುಲೈ, ೧೨ ನೆಯ ದಿನ ಪೂನಾಪಟ್ಟಣದಲ್ಲಿ ಆಗ ತಾನೆ ಘೋರ ನಿರಶನ ವ್ರತವನ್ನಾಚರಿಸಿ ಮುಗಿಸಿದ್ದ ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿ ಭಾರತ ರಾಷ್ಟ್ರನಾಯಕರ ಸಭೆ ನಡೆಯಿತು. ಸಭೆಯಲ್ಲಿ ಸಾಮುಹಿಕ ಸವಿನಯ ಶಾಸನ ಭಂಗ ಚಳುವಳಿಯನ್ನು ಮುಂದುವರಿಸುವುವೇ—ಬಿಡವುದೇ ಎನ್ನುವ ವಿಚಾರದಲ್ಲಿ ವಿಶೇಷ ಚರ್ಚೆ ನಡೆಯಿತು. ಈ ಸಭೆ ನಡೆದ ಮೂರನೇ ದಿನ ಬೆಳಗಿನಜಾವ ಪುನಾ ಪಟ್ಟಣದಲ್ಲಿ ಭೂಮಿ ನಡುಗಿತು. ಇದು ಆ ಸಂದರ್ಭದಲ್ಲಿ ಹುಟ್ಟಿದ ಕೃತಿ.]

ಪುಣ್ಯನಗರಿಯಲಿ ನಾಡನಾಯಕರ ಮೇಳ ನೆರೆದಿತ್ತು.

ನಾಯಕರ ನಾಯಕ !—ಲೋಕಪೂಜ್ಯನ ನಾಯಕತ್ವದಿ ಮೇಳ ನೆರೆದಿತ್ತು !

ತಿಲಕಮಂದಿರದಲ್ಲಿ ಭರತಮಾತೆಯ ಭಾವಿಜೀವನ ರೂಪುಗೊಳುತಿತ್ತು.

ತನ್ನ ಹಿತಕಾಗಿ ಹಲವು ನೋವನು ತಿಂದು ಬಿಸಿರಕುತವನೆ ಬಸಿದ ಕೋಟಿಮಕ್ಕಳನು ನೆನೆನೆನೆದು ಗೋಳಿಡುತಿರ್ದ ಮಾತಾಯ ಕಂಬನಿಯನೊರಸಲೆಳಸುತಿದ್ದರು— ನಾಯಕರು.

—ನೋಡಿ ತಾಯಿ ಕಂಪಿಸಿದಳು !

ಘೋರವ್ರತವನಾಚರಿಸಿ, ಕಾಲನೊಡನೆ ಸರಸವನಾಡಿಯಾಡಿ ಮರಳಿದಾ ವ್ರತವೀರನ ಸತ್ಯವಾಣಿಯ ಕೇಳೆ ಕೌತುಕದಿ ಕಾದಿದ್ದರು — ನಾಯಕರು.

ರಾಷ್ಟ್ರಸಭಾಭೂಷಣರು !— ಭಾರತಾಂಬೆಯ ಶೂರಸಂತಾನರು!- ತಾಯ ವೈರಿಗಳ ಸೊಕ್ಕಮುರಿಯಲು ಸ್ಥಿರಸಂಕಲ್ಪರು !—ಮುನ್ನೂರು ಮಂದಿ ವೀರನಾಯಕರಾ ನರೋತ್ತಮನ ನೆರಳಿನಲಿ ನೆರೆದುದನು ನೋಡಿ—

—ತಾಯಿ ಕಂಪಿಸಿದಳು !

ಒಡಕು ಹುಟ್ಟಿತ್ತು ಶಿಬಿರದಲಿ !—ಅರಿಯನಿರಿಯುವ ಕೈದು ವಿಷಯಕೆ ಹುಟ್ಟಿತ್ತು ಒಡಕು !

ಕೈದುವೋ, ಸಬರಮತೀ ಸಾಧು ನಿರ್ಮಿತ ದಿವ್ಯಾಸ್ತ್ರ!
—ಸಹವಿನಯ ಶಾಸನಭಂಗ!

ಕೆಲವರತ್ತ – ಕೆಲವರಿತ್ತ;
ಕೈದುವಿನಲಿ ಕುಂದು ಕಂಡರು—ಕೆಲವರು ;
ಕಾದುವುದಕೆ ಸಾಲದೆಂದರು ಕೆಲವರು ;
" ಇದ ಬಿಟ್ಟರುಂಟೇ ! ಅಸ್ತ್ರಗಳ ಅಸ್ತ್ರ—ಬ್ರಹ್ಮಾಸ್ತ್ರ !
ಬಿಸುಟರಿದ ಗತಿಯೇನು ?—ಆಗದಾಗದು ! "
—ಇಂತೆಂದು ಕೂಗಿದರು ಹಲವು ಮಂದಿ.

ಒಂದು ಪಕ್ಷಕೆ ತ್ಯಾಜ್ಯ!—ಒಂದು ಪಕ್ಷಕೆ ಗ್ರಾಹ್ಯ!—ಇಂತಾಯ್ತು ಸಹವಿನಯಶಾಸನ ಭಂಗಾಸ್ತ್ರ !

ಪಾಳೆಯದಿ ಇಂತು ಒಡಕು ದನಿಯೇಳೆ ಕೇಳಿ ನಿಡುಸುಯ್ದು—
—ತಾಯಿ ಕಂಪಿಸಿದಳು !

ಮೂವತ್ತುಮೂರ್ಕೋಟಿ ಸೆರೆಯಾಳು ಮಕ್ಕಳಾ
—ತಾಯಿ ಕಂಪಿಸಿದಳು !

ಆಸೆ ಬಯಲಾಯಿತೋ ! ಅಳಲು ಮಿತಿಮೀರಿತೋ ! ಭೀತಿ ತಲೆದೋರಿತೋ !—ಕನಲು ಅನಲಾಯಿತೋ ! ಏನು ಏನಾಯಿತೋ ! ಅಂತು—

—ತಾಯಿ ಕಂಪಿಸಿದಳು !

ಕಡುಘಾತುಕರೆಸಗಿದ ನಾನಾವಮಾನಗಳ ನರಕದಲಿ ನರಳಿ ನೆರೆನೊಂದ ನೂರುಸಾಸಿರ ಹತಭಾಗ್ಯ ಸಂತಾನರ—
—ತಾಯಿ ಕಂಪಿಸಿದಳು !

ಅತುಳಾತ್ಮ ಬಲನೆದ್ದ !—ಆಹಾ ! ವ್ಯೆನಿಮಿರಿ—
—ತಾಯಿ ಕಂಪಿಸಿದಳು !

ನೋಡಿದನು ಕಟ್ಟೊಡೆದು ಚೂರಾದ ಪಾಳೆಯವ !
ನೋಡಿದನು ಸೋಲುಂಡು ಧೃತಿಯುಡಗಿ ಕಳೆಗುಂದಿದಾಸನಗಳ!
" ಏನು ಬಂದಿತು ಕಾಲ ! " ಎಂದಂದು ರಾಷ್ಟ್ರಕೇಸರಿ ಮೈಕೊಡವಿ ಮೇಲೆದ್ದು, ಹರಿದು ಚೆಲ್ಲಿರ್ದ ಭಾರತಿಯ ಸಿರಿಗೊರಳಹಾರದ

ನರ್ಘ್ಯರತುನಗಳ ಮರಳಿ ಪೋಣಿಪೆನೊಂದೆಳೆಯುಲೆಂಬಂತೆ, ಮುನ್ನೂರು ನಾಯಕರ ಮೇಲೆ ದಿಟ್ಟಿಯನು ಬೀಸಿ ಗೈದನು ಗಂಭೀರ ಘೋಷವನು! ನರಹರಿಯು ಗರ್ಜನೆಯು ಕೇಳಿ,

—ತಾಯಿ ಕಂಪಿಸಿದಳು!

ಸಾರಿದನು ಸತ್ಯವ್ರತನು ಸಿಂಹಕಂಠದಲಿ ಇಂತೆಂದು—

“ ಸೋದರಿರಾ!—ಸಹಯೋಧರಿರಾ! – ನೆಚ್ಚುಗೆಡದಿರಿ!

ಹೋರಾಟದರ್ಧದಲಿ ಬಿಸುಡದಿರಿ ಆಯುಧವ!

ಕಾದಲಾರದೆ ಕೈದುವನು ದೂರುವರೇ?—ದೂಡುವರೇ?

ಕೆಚ್ಚಾಳುಗಳ ಕೈಲಿ ಕೋದಂಡವಿದು! ಬಲ್ಲವರ ಬ್ರಹ್ಮಾಸ್ತ್ರ!- ಧೃತಿಯುತರ ದಿವ್ಯಾಸ್ತ್ರ!—ಸವಿನಯಶಾಸನಭಂಗ!

ಕೇಳಿ! ಪಂದೆತನ ತರವಲ್ಲ!

ಹೇಳಿ! ಹದಿನಾಲ್ಕು ಲೋಕದಲಿ ಹೆತ್ತೊಡಲಿಗೆಣೆಯುಂಟೆ?

ನೀವ್ಕುಡಿದ ಎದೆಹಾಲ ನೆನೆನೆನೆದು ಹೇಳಿ!

ಕೋಟಿಮಾತೆಯರಿಗೆ ಮಿಗಿಲು—ಮುವ್ವತ್ತು ಮೂಕೋಟಿ ಮಕ್ಕಳ ತಾಯಿ–ಭರತಭೂಮಾತೆ!

ಹತವೀರ್ಯರಾಗದಿರಿ!—ಆಯುಧವ ತೊರೆಯದಿರಿ! ಬೆದರಿ ಹಿಮ್ಮೆಟ್ಟದಿರಿ!—ಲೋಕ ಹಳಿದೀತು!

ಜಯದ ಹೆಬ್ಬಾಗಿಲಲಿ-ಅರಿಗೆ ಬೆನ್ನಾಗುವಿರಾ?

ತಿಲಕನಾಣೆ!— ಭಾರತಿಯ ಸಿರಿನಿಟಿಲತಿಲಕದಾಣೆ!

ತಾಯ ಬಿಡುಗಡೆಗಾಗಿ ಪ್ರಾಣವನೆ ಮುಡುಪಿತ್ತ ಸಾವಿರ ಸಾವಿರ ಒಡಹುಟ್ಟಿದರಾಣೆ!

ಜನ್ಮದಾತೆಯ ಮೇಲಿನಾಣೆ!

ನಡೆಯಿರಿ!—ಸೆರೆಯ ಕಗ್ಗವಿಯಲಿ ಕರಗಿ ನರಳುತಿಹ ನೂರು ಸಾವಿರ ಸೋದರಿಯರ ನೆನೆಯಿರಿ!

ಅವರ ಕಣ್ಣೀರ ಮೇಲಿನಾಣೆ!—ಅವರ ಬೆಂದೊಡಲ ನಿಡುಸುಯಿಲ ಮೇಲಿನಾಣೆ!!

ಒತ್ತಿ ಹೇಳುವೆನು ಮತ್ತೊಮ್ಮೆ!—ಆ ಭಾರತಿಯ ಮೇಲಿನಾಣೆ!

ಹೆತ್ತಬಸುರಿಗೆ ದ್ರೋಹವೆಸಗದಿರಿ! ತಾಯ ಋಣ ಹೊತ್ತು ಸಾಯದಿರಿ!

ಈಯೆಮ್ಮ ಒಳಕಲಹ—ದೌರ್ಬಲ್ಯ—ಹೇಡಿತನಗಳೆಮ್ಮ ಕುಲ ಜಾತರ ತಲೆಯ ತಗ್ಗಿಸದಿರಲಿ!

ಸೋತಜೀವನ ಪ್ರೇತಜೀವನ!

ವಿಜಯವಧು ವೀರಲೋಲೆ!

ಅವರ ಕೊರಳಿಗೇ—ವಿಜಯ ಮಂದಾರಮಾಲೆ!

ಏಳಿ! ಏಳಿ! ಅಲಸತನವನು ಹರಿದೊಗೆದು—ಏಳಿ!

ಭೀತಿಯನು ಬಿಟ್ಟೇಳಿ! ಸೊಂಟವನು ಕಟ್ಟೇಳಿ!

ಸತ್ವಸಾಹಸಗಳ ಒರೆಹಚ್ಚಿನೋಡುವಾ ಸಮಯ ಸಾರಿಹುದೀಗ!

ಕೈಕೊಂಡ ಕಜ್ಜವನು ಮುಗಿಸೆ ಹಟವ ತೊಟ್ಟೇಳಿ!

ಬಗೆದ ಹಿರಿಗುರಿಯ ಮೇಲ್ನೋಟವನು ನೆಟ್ಟೇಳಿ!

ಶ್ರದ್ಧೆ ಭಕುತಿಗಳಿಂದ—ಗರಿಮೆ ಹಿರಿಮೆಗಳಿಂದ, ಆತ್ಮಬಲದಲಿ ನೆಚ್ಚಿಟ್ಟು-ಒಮ್ಮೊಗದಿ ಕೆಚ್ಚಿನಲಿ ಅರಿಮದಕೆ ಕಿಚ್ಚಿಡಲು ಎದ್ದೇಳಿ!

ಕೊಳ್ಳಿ ಕೊಳ್ಳೀ ಕೈದುವನು-ಸಹವಿನಯಶಾಸನ ಭಂಗವನು.

ನಾಡುನಾಡಿನಾ ಮೂಲೆ ಮೂಲೆಗೂ ಒಯ್ಯಿರಿದನು.

ಇದ ಪಿಡಿದು ಛಲದಿಂದ ಎಸಗಿರೀ ಅರಿಯ ಗರ್ವಭಂಗವನು!

ಸಾರಿ ಪೇಳುವೆನು-ತಿಳಿಯಿರಿ, ಇದೆಯೆಮ್ಮ ಬೀಜಮಂತ್ರ!

ಇದರಿಂದ ಮೊಳೆತು ಮೂಡುವುದು—ಕಲ್ಪತರು—

—ನಮ್ಮ ಸ್ವಾತಂತ್ರ್ಯ!"

* * * *

ಮುನ್ನೂರು ಮಂದಿ ರಾಷ್ಟ್ರನಾಯಕರು ನೀರವದಿ ಕೇಳಿದರು ಮಹಾತ್ಮನಾ ಮಂತ್ರೋಪದೇಶವನು!—

—ಕೇಳಿ,

—ತಾಯಿ ಕಂಪಿಸಿದಳು.

ಹಿಂದನು ನೆನೆದೋ?—ಇಂದನು ಕಂಡೋ?—ಮುಂದನು ಬಗೆದೋ? ಬಲ್ಲವರಾರು?-ಅಂತು,

—ತಾಯಿ ಕಂಪಿಸಿದಳು.

# ೧೪. ಬಂಧನ?

(ಶ್ರೀಮುಖ ಶ್ರಾವಣ ಶುಕ್ಲ ದಶಮಿಯ ನಡುರಾತ್ರಿ—೧೯೩೩ನೇ ಜುಲೈ ೩೧)

ಹಿಡಿದೊಯ್ದರಂತೆ ಮಹಾತ್ಮನನು ನಡುರಾತ್ರಿಯಲಿ!—

ಹಗಲ ಬೆಳಕಿನಲಿ ಹೀನ ಕಾರ್ಯವ ಮಾಡಲಳುಕಿ, ನಿಶೆಯ ಮರೆಯಲಾ ಹೊಲೆಗೆಲಸವನೆಸಗಿ ಮೆರೆದರು!—ಆಹಾ! ಏನು ವೀರರೋ!

ತಮ್ಮ ಬಿತ್ತರದ ರಾಜ್ಯದಲಿ ಭಾನು ಮುಳುಗನು ಯಾವ ಕಾಲಕು—ಎಂದು ಕೊಚ್ಚುವ ಕೆಚ್ಚುಗಲಿಗಳು ಅವನ ಬೆನ್ನಲೆ ಕೀಳು ಕೆಲಸಕೆ ಕೈಯನಿಟ್ಟರಲಾ! ಭಾರತಿಯ ಸಿರಿಮುಕುಟದನರ್ಘ್ಯರತುನವನು ಕದ್ದರಲಾ!!

ಛೆ! ಛೀ!—ಹಿಡಿದರೇ!—ಕದ್ದರೇ!

ಏನ ಕದ್ದರು?—ಹಿಡಿದರೇನನು?

ಕೋಟಿ ಮೂವತ್ತುಮೂರು ಎದೆಗಳಲಿ ನೆಲಸಿರುವ ವಿರಾಟರೂಪನನು ಪಿಡಿವುದೇಸಿವರು?

ಕೀರ್ತಿ ಧವಳಗಿರಿಯೆನೆ—ಪ್ರೇಮ ಮಿಸುನಿಗಿರಿಯೆನೆ—ಸತ್ಯ ಸಿರಿಗೌರಿಗಿರಿಯೆನೆ ಮೆರೆಯುತಿರುವೀ ಭರತಕುಲಮೇರುವನು ಅಡರಲಾಪರೆ ಹೆಳವರಿವರು?

ಅವನಾತ್ಮಬಲ ಜಲಧಿಯದು, ತನ್ನೊಡಲ ಪೇರಲೆಯ ಮಾಲೆಗಳ ನಿರ್ಘೋಷದಿಂದ ತುಂಬಿ ತುಳುಕುತಿದೆ ದಶದಿಸೆಯ ಅಂಬರವ—ಭೂತಲದ ಮೂಲೆಗಳ ಮಾರ್ದನಿಯುಂ ಬರುವಂತೆ!

ಆ ಮರುಳರಿದನೊಂದು ಬೊಗಸೆಯಲಿ ಅಳೆಯಲಾಪರೆ?

ನೂರಾರು ನೋವುಗಳ ಬೇವನುಂಡುಂಡು, ಕನಲಿ ಕಿಚ್ಚೆದ್ದು, ಸಿಡಿರೋಷದಲಿ ಅಬ್ಬರಿಸಿಯಾರ್ಭಟಿಸಿ ಹೂಂಕಾರಗೈಯುತಿಹ ಮುವ್ವತ್ತುಮೂರು ಕೋಟಿ ಕಂಠಗಳನೊಂದು ಕೈ ಅಡಗಿಪುದೆ?

ನಮ್ಮ ತಾಯ್ ಕಾಮಧೇನು!—ಆಕೆ ವ್ಯೆಕೊಡವೆ ಹೊರ

ಚಿಮ್ಮಿದೀ ಮಹಾಶಕ್ತಿವಾಹಿನಿ ನಾಲ್ದೆಸೆಯ ಗಡಿಯನೊತ್ತಿ ಹರಿಯು ತಿದೆ! ಉಕ್ಕಿ ಉಕ್ಕಿ.

ಅದರ ರುದ್ರಗತಿಯ ಮರಳುದಿಣ್ಣೆಯೊಂದು ತಡೆಯಬಲ್ಲುದೇ?

ಗಿರಿಯೇನು!—ವನವೇನು! ಎಲ್ಲವನು ಮೆಟ್ಟಿ, ಒಣತರುಗಳ ತಲೆಕೆಳಗು ಮಾಡಿ, ತರಗೆಲೆಗಳ ತೂರಿ ತೂರಿ ನುಗ್ಗಿ ಬೀಸುತಿಹ ಚಂಡ ಮಾರುತನ ಹರಕುಚೀಲದಲಿ ಪಿಡಿಯಲಾಪರೆ?

ಆಹಾ!—ಕಳ್ಳರೋ!—ಪಂದೆಗಳೋ! ಮರುಳರೋ!—ಹೆಳವರೋ!—ಹುಚ್ಚರೋ ಪೆಚ್ಚರೋ—

ಬಿಸಿಲ ಕೋಲ ತುಡುಗಿದಂತೆ, ಬರಿಯ ನೆರಳನಪ್ಪಿದಂತೆ—ಹಿಂದು ಮುಂದು ಇಲ್ಲದಂತೆ ಆಯಿತೀ ಬಿಳಿಯರಾಟ!

# ೧೫. ವಸಂತ ಸ್ವಪ್ನ

ಋತುರಾಜನ ಮಾಯೆಯ ಸೋಂಕಿಗೆ ಭೂರಮೆಯ ತನು ಜುಮ್ಮೆಂದಿತೊ ಎನೆ—ಮೆರೆದಿದ್ದುದಲ್ಲಿ ಆನಂದಪುರದಲ್ಲಿ—ತೆರತೆರನ ಕುಸುಮಗಳ ಆರಾಮವೊಂದು—ಚೈತ್ರಸಂಧ್ಯಾಮಿಸುನಿರವಿರಶ್ಮಿಲೇಪದಲಿ, ಮನಕಣ್ಮನಗಳಿಗೆ ಚೆಲುವನೆರೆದು—ನಂದನದ ಪ್ರತಿಚಿತ್ರದಂತೆ.

ಕುಸುಮ ಲಲನೆಯರ ಮಧುಹೃದಯಗಳ ಸೂರೆಗೈದು ಸೊಕ್ಕಿರ್ದ ಭೃಂಗಸಂಕುಲದ ಝೇಂಕಾರ ಶ್ರುತಿಯಾಗೆ—ಪರಿಪರಿಯ ಖಗಕುಲದ ಕೊರಳ ಮುರಳೀಗಾನಲಹರಿಯಲಿ ತೂಗಿ ತೂಗಿ ತೇಂಕಾಡುತಿದ್ದಳು—ತಿರೆ ತರುಣಿ—ಯಾವುದೋ ಹೊಸಸುಖವು ಮೈಗೂಡಿದಂತೆ.

ಮುದ್ದಿಟ್ಟು ಮೈಸವರೆ ಗಂಧಬಾಂಧವನು, ಸುಮ ಸುವಾಸಿನಿಯರ ಎದೆಯೊಲವು ಪರಿಮಳಿಸಿ ತುಳುಕುತಿತ್ತು—ಶ್ಯಾಮಸುಂದರನ ಕಂಡು ಕೆರಳಿದ ಗೋಪಿಯರ ಚಿರಬಯಕೆಯಂತೆ.

ಆ ಕುಸುಮೋದ್ಯಾನದಲಿಂತು ಚಿತ್ತವನು ಅಪಹರಿಪ ವಿವಿಧ ವರ್ಣವಿನ್ಯಾಸವಲಿ--ಕರ್ಣವನು ಸೆರೆಗೈವ ತರ ತರದ ನಾದಲೀಲಾತರಂಗ ಕೇಳಿಯಲಿ--ತನುಮನಗಳನು ಪರವಶಗೈವ ಪರಿಪರಿಯ ಪರಿಮಳಗಳ ಮೇಳದಲಿ—ಪವತಲದ ತಿರೆಯನೇ ಮರೆತು ವಿಹರಿಸುತಿದ್ದರು ತರುಣದಂಪತಿಗಳೀರ್ವರು—ಮನಸಿಜನು ಮೈತಳೆದು ಮಡದಿಯೊಡಗೂಡಿದಂತೆ.

ನಡೆಯುವರೊಮ್ಮೆ, ನಡೆನಡೆಯುತ ನಿಲ್ಲುವರೊಮ್ಮೆ, ಮೈಗೆ ಮೈ ಸೋಂಕಿಸುತ ಮತ್ತೆ ನಡೆಯುವರೊಮ್ಮೆ—

ಮೆಲ್ಲುಲಿಯಲಿ ಏನನೋ ಹೇಳುವರೊಮ್ಮೆ-ಕೇಳುವರೊಮ್ಮೆ,-ಸುಖ ಮಾತಿಗೂ ಮೀರೆ ನೋಟಕೆ ನೋಟವ ಹೆಣೆದು ನೋಡುವರೊಮ್ಮೆ--

ನೋಡ ನೋಡುತ ಪತಿ ಏನನೋ ನೆನೆದು ಮೆಲುನಗೆಯ ಚೆಲ್ಲುವನೊವ್ಮೆ—

ಅವನ ಮನಸ ಕನಸ ತಿಳಿದು, ಸತಿ ಚೆಂದುಟಿಗಳಲಿ ನಗೆ ಮುಗುಳನರಳಿಸುವಳೊವ್ಮೆ -

ಮೆಲುಮೆಲನೆ ಅಡಿಯಿಡುತ ಹೆಣ್ಣು—ಸ್ನೇಹದಲಿ ಸುಮಸಖಿಯರ ದಳಕದಪುಗಳ ಸವರುವಳೊವ್ಮೆ—

ದಾರಿಯಲಿ ನಳಿನಳಿಸುತ ವೈಚಾಚಿ-ಕೋ—ಎನುತಿರ್ದ ದುಂಡುಮಲ್ಲಿಗೆಯ ಕಿತ್ತು ಗಂಡು—ಹೆಣ್ಣ ಹೆರಳಿಗೆ ಮುಡಿಸಿ ಮುದ್ದಿಸುವನೊವ್ಮೆ—ಇನ್ನೊವ್ಮೆ—ಮತ್ತೊವ್ಮೆ—

ಇಂತು ಎರಡು ದೇಹಗಳ ಜೀವ—ದನಿಗೆ ಮಾರ್ದನಿಯಂತೆ ಒಂದೆ ಮೇಳದಲಿ ಮಿಡಿಯುತ್ತ ಅಡಿಯಿಟ್ಟು ವಿಹರಿಸುತಿರೆಯಿರೆ -

ಮಧುಪಾನದಮಲು ತಲೆಗೇರೆ ವೈಮರೆತ ಮರಿದುಂಬಿಯೊಂದು, ಚಲಿಸದಿಹ ಪೂವನದಿ ಚಲಿಪ ಸುಮವೋಯೆನೆ ಚೆಲುವಾದ ಪೆಣ್ಮೊಗದ ಬೊಗಸೆಗಂಗಳಲಿ ಸೆರೆಯಾದ ಸೋದರರ ತಾ ಬಿಡಿಪೆನೆಂದು ಬಂದೆರಗೆ ಝೇಂಕರಿಸಿ ಸಿರಿಮೊಗದ ಮೇಲೆ—ಭಯಗೊಂಡು ಕಂಪಿಸುತ ಸುಮಕೋಮಲಾಂಗಿ, " ಓ! ನಲ್ಲ! " ಎಂದೆನುತ ಉಸಿರೆಳೆದು ಮೊಗದಿರುವಿ ವೈ ಬಳುಕಿ ಬರಸೆಳೆದು ಬಿಗಿದಪ್ಪೆ ಮನದಿನಿಯನನ್ನು—ನಲ್ಲನುರೆ ಖತಿಗೊಂಡು ನೆರೆ ಕರುಬಿನಿಂದ " ಈ ಸುಮವು ನನ್ನದೆಲೆ ಕೇಡಿಗನೆ ತೊಲಗು! " ಎಂದಂದು ಕೈಬೀಸಿ ಬಂಡುಣಿಯನಟ್ಟೆ, ವೈದಡವುತಿನಿಯಳನು ಸಂತೈಸುತಿರಲಲ್ಲಿ—ಇದಿರಲ್ಲಿ—

ಸುಮಗೋಪಿಯರೊಡನೆ ರಾಸಕ್ರೀಡೆಯನಾಡೆ ಬಯಸಿ ರೂಪವನು ಮರೆಸಿ ಬಂದನೋ ಕೃಷ್ಣ ಎನೆ ಮೆರೆದ ಚೆಲುವಾದ ಚಿಟ್ಟೆಯೊಂದನು ಕಂಡರು—

ಹೂವಿಂದ ಹೂವೆಡೆಗೆ ಹಾರುತ್ತ, ಹಾರುತಿಹ ಹೂವಂತೆ ತೋರುತ್ತ, ತೇಲುತ್ತ-ಕುಣಿಯುತ್ತ—ಕುಳಿಕುಳಿತು ನೆಗೆಯುತ್ತ—ಹೂಗಳೆದೆಯ ಸುಧೆಯ ಸವಿದು, ಹುಚ್ಚೆದ್ದು ಭ್ರಮಿಸುತ್ತ ರಮಿಸುತ್ತ ಇದ್ದೊಂದು ಬಣ್ಣ ಬಣ್ಣದ—ಕಣ್ಣು ಕಣ್ಣಿನ ಚಿಟ್ಟೆಯನು—ಚೆಲುವಿನ

ಮೊಟ್ಟೆಯನು ಒಟ್ಟಿಗೇ ಕಂಡರು ಚೆಲುವ ಚೆಲುವೆಯರು ಚಲಿಸದೆಯೆ ನಿಂತು.

ಚಿತ್ರವನು ಅಪಹರಿಸಿದೀ ಬೇಟದ ನೋಟವನು ನೋಡ ನೋಡುತ,—

" ಏನ ಚಪಲ ಚಿತ್ತದ ಚಿಟ್ಟೆ ! ಎಂತು ಹರಿಯ ಬಿಟ್ಟಿಹುದು ಚಿತ್ತವನು ! ಆ ಹೂವು-ಈ ಹೂವು-ಎಲ್ಲ ಹೂವೂ ಬೇಕಿದಕೆ !! ಏನಾಸೆ! ಎನಿತಾಸೆ!—ಆಹಾ ! ಕಂಡು ಕಂಡುದ ಬಯಸುವ ಚಪಲೆಯರ ವಿಹಾರಿಸುವ ಚಿಟ್ಟೆಯಿದು ಇರಬೇಕು— ಹೆಣ್ಣಿರಬೇಕು ! "—

—ಎಂದೆನಿಸಿತು ಗಂಡಿಗೆ.

"ಏನು ಚಂಚಲವಿದರ ಮನ ! ಒಂದು ಹೂವಿನ ಮಧುವ ಹೀರುತ ನೆರೆಯ ಕುಸುಮೆಯು ಕರೆಯುವುದು ಕಣ್ಸನ್ನೆ ಮಾಡಿ ! ಅದರೆದೆಯಲಿ ನಲಿನಲಿಯುತಲೆ ಆಚೆ ಹೂವನು ಬಯಸುವುದು ನಾಚಿಕೆಯು ಬಿಟ್ಟು ! ಅರೆಮುತ್ತನದಕಿತ್ತು ಓಡುವುದು ಬೇರೊಂದಕೆ! ಆಹಾ! ಒಂದು ಸುಮಕೆ ಮೈಯನಿತ್ತು, ಒಂದು ಸುಮಕೆ ಮನವ ತೆತ್ತು—ಒಂದು ಸುಮಕೆ ಕಣ್ಣನಿತ್ತು, ಒಂದು ಸುಮಕೆ ಬಾಯನಿತ್ತು—ಎಲ್ಲ ಕುಸುಮೆಯರಿಗೂ ಕೈಕೊಡುವ ಅಸ್ಥಿರ ಮನದ ಚಿಟ್ಟೆಯಿದು, ನಿಜವಾಗಿ ಗಂಡಿರಬೇಕು !"—

—ಎಂದೆನಿಸಿತು ಹೆಣ್ಣಿಗೆ.

ಇಂತು ಆ ಚಿಟ್ಟೆಯ ಹೆಣ್ಣುತನ-ಗಂಡುತನದೂಹೆ ನಡೆದಿರೆ ಗಂಡು-ಹೆಣ್ಣಿನ ಮನಗಳಲಿ-ಒಬ್ಬರ ಮೊಗವನೊಬ್ಬರು ನೋಡಿದರು— ನೀರನೀರೆಯರು ನಸುನಗುತ. ನಲ್ಲ ನಲ್ಲೆಯ ಹೆಗಲಮೇಲೆ ಕೈಯನಿಟ್ಟು—

" ನೋಡಿದೆಯ ಆ ಚಿಟ್ಟೆಯಾಟವನು ಓ, ಎನ್ನ ಚಿರಚಂಚಲಾಕ್ಷೀ ! ಅದರಾಟವನು ನೋಡಿ ನನಗೆನಿಸುತಿದೆ ಅದು—"

—ಎನುವನಿತರಲೆ, ತರಳೆ,

" ಗಂಡಿರಬೇಕು !—ಭಂಡಗಂಡಿರಬೇಕು !!—ನಿಜವಾಗಿ !! "

—ಎಂದು ಜೋಡಿಸಿದಳು ಮಾತ,

ಕುಡಿನೋಟದೊಯ್ಯಾರದಿಂದೊಂದು ಸಲ ಮೈಕುಲುಕಿ—ಕೊರಳಿಂದ

ನಗುವಿನಲಿ ಹೊಮ್ಮಿ ಕಂಚಕಿರುಗೆಜ್ಜೆ ಸರದುಲಿಯಂತೆ—ಅಮಿತ ಪ್ರೇಮುದಲಿ ಇನಿಯನಂಗಕೆ ತನುಲತೆಯನೊತ್ತಿ—ಸುತ್ತಿ.

*  *  *

ಸಂಧ್ಯಾಸುಂದರಿಯು ಪಶ್ಚಿಮಾದ್ರಿಯ ಆಚೆ ತಪ್ಪಲಿಗೆ ಸಾರಿದಳು —ಅತ್ತ; ನಿಶಾಸುಂದರಿಯು ಪೂರ್ವಾದ್ರಿಯನೇರಿ, ಮೆಲುಮೆಲನೆ ಅಡಿಯಿಡುತ ಇಳಿದು ಸಾರಿದಳು—ಇತ್ತ.

ಈ ಪ್ರಿಯಪ್ರೇಯಸಿಯರ ಪ್ರಣಯಕೇಳಿಯ ಮರೆಮಾಡಲೆಳೆದಳೋ ಇರುಳದೇವಿ ತನ್ನ ಸೆರಗ ತೆರೆಯನೆನೆ—ಆವರಿಸಿತು ಕಾಲಿಮೆ.

ತನುವಾದ ನಿಶಿಯಾಳದಲಿ—ಕಂಪೂಗೆವ ಪೂವನದಿ ರಾಗವೇರಿತು ರಮಣ ರಮಣಿಯರ ಪ್ರಣಯಕೆ.

ಮಾತು ಕಥೆ ಏನು ನಡೆವುದೋ—ಮುಂದೆ!—ಎಂದು ಮಂದಾನಿಲನು ಮೋಹಿನಿಯ ಮುಂಗರುಳೋಳಿಯುಲವಿತು ಆಲಿಸುತಿದ್ದನು ನೆರೆ ಕೌತುಕದಿ.

ಏನು ಸೋಜಿಗವಪ್ಪುದೋ!—ಎಂದು ಬಾನದೇವನು ಮೇಲೆ ಕೋಟಿಕಣ್ಣುಗಳ ಅರಳಿಸಿ ನೋಡುತಿದ್ದನು ನೀರವದಿ ಅಚ್ಚರಿಯಲಿ.

ಆದರೇನು! ಅಂಬರಾನಿಲರ ಹೊಂಚುಗಿಂಚುಗಳನಿನಿತು ಲೆಕ್ಕಿಸದೆ, ಪತಿ ಸತಿಯು ನಡುವಿಡಿದು—ನಡೆಯೆ ಅಂಗಾಲಿಗಮೃತವೋ ಎನೆ ಇರ್ದ ಹಸುರು ಹುಲ್ಲ ಮಕಮಲ್ಲ ಹಾಸಿಗೆಗೆ ಕರೆದೊಯ್ದು ಕುಳಿತನೆದೆಯೊಡತಿಯೊಡಗೂಡಿ.

ಎರಡು ದೇಹಗಳ ಬಿಸಿರಕುತದ ಕಣಕಣವು ಒಂದೆ ತಾನದಲಿ ದನಿಗೂಡಿ ಓಡುತಿರೆ ನಾಡಿನಾಡಿಯಲಿ—ಹಾಲು ಸಕ್ಕರೆಯಂತೆ ಒಂದಾದ ಮನಗಳು ತನುಗಳೆರಡುತನವನಳಿಸೆ ಹೋರಾಡುತಿರೆ ಅತನು ತೆಕ್ಕೆಯಲಿ—

ಆಸೆ ಪಾಲ್ಗಡಲ ಮಥನದಲಿ ತಲದಿಂದ ತೇಲಿಬಂದ ಕಿರಿಮುತ್ತು, ಹಿರಿಮುತ್ತು—ಬಿಸಿಮುತ್ತು, ರಸಮುತ್ತು—ಬಿಡಿಮುತ್ತು ಸರಮುತ್ತು —ಅವಸರದ ಅರೆಮುತ್ತು, ಸಾವಧಾನದ ಸವಿಮುತ್ತು—ಕಂಪೂಗೆವ ಕೆನೆ ಹಾಲೊ, ತಂಪೆರೆವ ಎಳನೀರೋ—ಎನೆ ಅಗಣಿತಮುತ್ತುಗಳಿಂತು

ಸೂರೆಯಾಗುತಿರೆ ಅನಿಲ ಗಗನಗಳ ಸಾಕ್ಷಿಯಲಿ—

—ಕಂಡಳು ಕಾಮಿನಿ,

ಉತ್ತರಾಂಗಣದಿ ತಾರೆಯನು—ಧೃವತಾರೆಯನು. ಆ ಸಮಯದಲಿ ಕೊಳುತಿರ್ದ ಸವಿಮುತ್ತನರ್ಧದಲೆ ಬಿಟ್ಟು—ತೋಳಬಳ್ಳಿಯ ಮೇಲೆತ್ತಿ ತೋರಬೆರಳನು ಚಾಚಿ, ತಾರೆಯನು ತೋರಿ—ನಯನಗಳಲಿ ಚಿಮ್ಮಿ ನಲುಮೆ ಇನಿಯಗಿಂತುಸುರಿದಳು ಸಾರವತಿ ಸರಸದಲಿ—

"ಓ, ನಲ್ಲ, ನೋಡದೋ ನೋಡಲ್ಲಿ! ಧೃವತಾರೆ ಬೆಳಗುತಿದೆ ನಭದಲ್ಲಿ! ಸುತ್ತುತಿಹ ಶತಕೋಟಿ ತಾರೆಗಳ ನಡುವೆ ಚಲಿಸದೆಯೆ ಮಿನುಗುತಿಹ ಆ ತಾರೆಗೀ ಜಗದಿ ಸರಿ—"

—ಎನ್ನುವನಿತರಲೆ ಏಣಾಕ್ಷಿ,

"—ಸಾಟಿಯೆನೆ ಪುರುಷನೆದೆಯೊಲವ ಜೋತಿ!"

—ಎಂದು ಹೆಣೆದನು ಮಾತ ನಲುಮೆಗಾರ ನಸುನಕ್ಕು ಒಂದು ಬಿಸಿ ಮುತ್ತ ಕೋದು.

"ಆಹಹಾ! ಏನು ಚತುರನೋ ಮಾತಿನಮಲ್ಲ! ನನ್ನ ನಲ್ಲ!—ಸುಳ್ಳುಹೇಳುವ ನಲ್ಲ!!"

—ಎಂದಳು ಮೋಹಿನಿ, ಹುಬ್ಬನು ಎತ್ತಿ, ನಗೆಯನು ಚೆಲ್ಲಿ—ತಲೆಯನು ತೂಗಿ—ತೂಗಿ.

"ನಿಜವನೇ ನುಡಿದೆ ನೀನೆಲೆ ನೀರಜಾಕ್ಷಿ! ಸುಳ್ಳು ಹೇಳುವನು ಅಲ್ಲ ನಾನೆಂದಿಗೂ!—ಅವನಾಣೆ!"

—ಎಂದು ಪ್ರತಿಯುತ್ತರವನೀಯೆ ಉತ್ತರಕೆ ಕೈ ಬೀಸಿ—

"ಅಬ್ಬ!"

—ಎಂದಳು ಲಲನೆ, ಕಾಂತನ ಹೊರಳಿಸಿದ ಮಾತ ಮರುನುಡಿಗೆ ಬೆರಗಾಗಿ-ಬಾಯ್ಗೆ ಕೈಯೊತ್ತಿಕೊಂಡು.

"ನಿಜವಲ್ತೆ!—ನೋಡು ನೋಡಲ್ಲಿ-ಓ, ಎನ್ನ ಮನದನ್ನೆ-ಮೈಬಳ್ಳಿ!—ಯುಗಯುಗದಿ ಕೋಟಿತಾರಾಲಲನೆಯರು, ಎಡಬಿಡದೆ ಭ್ರಮಿಸುತ್ತ ಕಣ್ಮಿನುಗಿ ಕರೆದರೂ, ತಾ ಮಾತ್ರ ದೃಢದಿಂದ ಧಿಕ್ಕರಿಸಿ

ಅಲುಗದೆಯೆ ಬೆಳಗುತಿಹನದೊ ನೋಡು ನೋಡೆನ್ನ ಪದ್ಮಾನನೆ!—ಹೃದಯಕಮಲಾಸನೆ!''—

—ಎಂದುಸುರಿದನು ಅಮಿತ ಪ್ರೇಮದಲಿ ಪ್ರಣಯಕಲಾಕೋವಿದನು—ಇಂದುಮುಖಿಯ ಕದಪುಗಳ ಸವರಿ, ಕುರುಳ ನೇವರಿಸಿ, ಎದೆಯೊಲವ ಕಂಗಳಲಿ ಕೋಡಿಹರಿಸಿ—ಮನದಿನಿಯಳ ಮುಖಪದ್ಮ ಸುಧಾಪಾನವನು ಬಯಸಿ—ಬಯಸಿ.

ಒಲವಿನ್ನೈಸಿರಿಯಿಂದ ತುಂಬಿಬರೆ ಹೃದಯಗಳು, ಜಿಹ್ವೆಗಳು ಬರಿದಾಗಿ ದಾರಿದ್ರ್ಯಕೀಡಾಯ್ತು! ಜಾಣರಲೆ!—ಜಾಣರಹ! ಬಡತನವ ಕೈಬಿಟ್ಟು, ಮಧುರಮೌನದಲಿ ಅಧರನವನೀತವನು ಸವಿಯುತ್ತ—ಸವಿಯುತ್ತ, ಮಧುರತರ ವಿಸ್ಮೃತಿಯ ಜೇನಹೊಳೆಯಲಿ ಮುಳುಗಿದರು ತರುಣ ತರುಣಿಯರೊಂದಾಗಿ, ಕೆಂಪು-ನೀಲಿಗಳು ಬೆರೆತು ಕೆನ್ನೀಲಿಯಾದಂತೆ.

* * *

ಸಂಧ್ಯಾ-ನಿಶೆವನಿತೆಯರು ತಾವು ನೋಡಿದೀ ಆದಿರಸರೂಪಕದ ಸವಿಸುದ್ದಿಯನು ಕಿವಿಯಲುಸಿರೆ, ಹೆಣ್ಣು ಕೌತುಕದಿಂದೆದ್ದು ಇಣಿಕಿದಳು ಉಷೆವೆಣ್ಣು ಮೂಡಲಗಿರಿಯ ಹಿಂದಿನಿಂದ; ನೋಡ ನೋಡುತ—"ಅರರೇ!'' ಎಂದಳು ಆ ಕ್ಷಣದಲಿ ನಡೆದ ಪವಾಡವೊಂದನು ನೋಡಿ—ಬಿಡುಗಣ್ಣಾಗಿ—ಬೆಕ್ಕಸಬೆರಗಾಗಿ!

* * *

ಅಲ್ಲಿ—ಆನಂದಪುರದಾ ಕುಸುಮೋದ್ಯಾನದಲಿ—ಸುಖಮೂರ್ಛೆಯಾಳದಿಂದೊಮ್ಮೆಗೇ ತೇಲಿದರು ನೀರನೀರೆಯರು-ಎದ್ದು. ಏಳುತೇಳುತ ನರರೂಪವನು ಅಳಿದರು. ನಿಂತೆಡೆಯಲೇ ನೀರ--ಧೀರ ಗಂಭೀರತರುವಾಗೆ--ನೀರೆ, ಅದ ತಬ್ಬಿಹಬ್ಬಿದಳು ಹೂವಿಡಿದ ನವಮಲ್ಲಿಕಾಲತೆಯಾಗಿ.

ಪಾದಪದ ಪದತಲದಿ ಪಸರಿಸಿತು ಹೊಸದಾಗಿ—ಕಿರಿದಾದ ತಿಳಿನೀರ ಕೊಳವೊಂದು—ಹೊಸರೂಪಕೆ ಹಿಡಿದ ರನ್ನಗನ್ನಡಿಯಂತೆ. ಅದರ ಮಧ್ಯದಲಿ, ರೂಪಲಕುಮಿಯ ಹರಿಪೀಠದಂತೆಸೆದ ಕೆಂದಾವರೆಯು ನಳನಳಿಸುತ ಮೂಡಿತೊಂದು ಮಧುಕರನೊಡಗೂಡಿ.

ಇದನ್ನೋಡಿ ಮಲ್ಲಿಕಾಲತೆ ಮರವ ಕುರಿತು—
" ನೋಡಲ್ಲಿ, ತರುದೇವ! ನಾವಿರುಳುಗನಸ ಮುಗಿಸೆ—"
—ಎಂದು ಮಾತು ಮುಗಿಸುವ ಮುನ್ನ-
" ಮತ್ತೀರ್ವರಾರೋ ಇಹರಲ್ಲಿ ಹಗಲುಗನಸ ಹೂಡಿ! "—
—ಎಂದುತ್ತರವನಿತ್ತ ತರುದೇವ.

# ೧೬. ಕನಕಪುರದ ಪಂಕಜ

ಬಾಳಬಿರುಗಾಳಿಯಲಿ ತರಗೆಲೆಯಾಗಿ—ನಾನೊಂದು ನಡುಶರದ ಸಂಜೆಯಲಿ—ಸಾರಿದೆನು ಆ ಊರ—ಊರೇನು ?—ನೂರು ಮನೆಗಳ ಹಳ್ಳಿ.

ಊರ ಬಾಗಿಲಲಿ ಕಲ್ಲುಹಲಗೆಯೊಂದರೆಮುಗುಚಿ ಹೂತಿತ್ತು—ನಾಚಿ ತಲೆಮರೆಸಿಕೊಂಡಂತೆ!

ಅದರ ಮೇಲಿತ್ತು ಹಳ್ಳಿಯ ಹೆಸರು—"ಕನಕಪುರ"—ಎಂದು.

ಹಳ್ಳಿಯ ಹೊಕ್ಕೆನು ; ನಾಲ್ಕುದಿನವಿದ್ದು ನೋಡಿದೆನು ಕನಕಪುರವ.

ಆಹಾ! ಕ-ನ-ಕ-ಪು-ರ-ವಂತೆ! ನಾಯಿಯ ಹೆಸರು ಸಂಪಗೆ-ಎಂದಂತೆ!

ಕೇಳಿ—ಅದರ ವೈಭವವ :

ನಾಲ್ಕಾರು ಹಾಳು ಬೀದಿಗಳು—ಹೊಲಸು ದೇವತೆ ನಡೆನಡೆದು ಸವೆಸಿದ ಕಾಲುಹಾದಿಗಳು!

ಕತ್ತೆಗಳ ಬಳಸಿ—ನಾಯಿಗಳ ದಾಟಿ—ಎಮ್ಮೆದನಕರುಗಳ ಮಂದೆಯನು ತೂರಿ—ಮೂಗುಮುಚ್ಚಿ ತುದಿಗಾಲ ಮೇಲೆ ನಡೆಯಬೇಕಲ್ಲಿ!—

—ಕನಕಪುರದಲ್ಲಿ.

ಚಿತ್ರಕ್ಕೆ ತಕ್ಕ ಚೌಕಟ್ಟಾಗಿ—ಬೀದಿಗಳಿಕ್ಕೆಲದಲೂ, ಹರಕು ಮನೆಗಳು—ಮುರುಕು ಮನೆಗಳು—ಗೂಬೆಗಳ ಗೂಡುಗಳೋ—ಕುಹಕದ ಗುಹೆಗಳೊ—ಎನೆ ಕಣ್ತುಂಬ ಹೊಲಸಾಗಿ ಇದ್ದುವಲ್ಲಿ—

—ಕನಕಪುರದಲ್ಲಿ.

ಬೀದಿಯಾಯ್ತು-ಮನೆಗಳಾಯ್ತು-ಇನ್ನಾ ಪುರದ ನರನಾರಿಯರು!

ಆಹಾ! ಊರಿಗೆ ತಕ್ಕವರು—ತಿಪ್ಪೆಯ ಕ್ರಿಮಿಕೀಟಗಳು!

ಹುಟ್ಟಿನಲಿ, ಆ ಕುಲ—ಈ ಕುಲ, ಆ ಜಾತಿ—ಈ ಜಾತಿ, ಆ ಬಣ್ಣ—ಈ ಬಣ್ಣ, ಅಷ್ಟೇ!

ರೊಚ್ಚಿಯಲಿ ಮಿಂದೆದ್ದ—ಒಕ್ಕಣ್ಣ ಹೆಮ್ಮೈಯ ಕೋಣನ ಕಾರೊಡಲಿನಂತೆಲ್ಲ ಒಂದೇ ಬಣ್ಣ!—ಊರೆಲ್ಲ ಹೊಲಗೇರಿಯಾದೀ—

—ಕನಕಪುರದಲ್ಲಿ!

ಅದೊ ನೋಡಿ, ಅವನೊಂದು ಜಾತಿಯಂತೆ-ಹುಟ್ಟುತ್ತ ಮೊದಲ ಜಾತಿಗನಂತೆ! ನಡತೆಯಲೊ?—ಇದ ಕೇಳಿ—ನೀವೆ ಹೇಳಿ:

ನಡುವಯಸಿನಲಿ ಸಾಧುಮಡದಿಯ ಕಾಡಿ ಕೊಂದು, ಮನೆತುಂಬ ಬೆಳೆದ ಮಕ್ಕಳು ನಾಲ್ಕಾರು ಗಂಡು ಹೆಣ್ಣುಗಳಿರೆ, ಅವರಿದಿರಲೆ—ಪ್ರತ್ಯಕ್ಷ ಮಾರಿ!—ಮನೆ ಮುಸುರೆಯುವಳ ಕೂಡಿ ಬಾಳುತಿಹ ಕಾಳ ಕಾಮುಕನ ಜಾತಿಯಾವುದು?—

—ನೀವೆ ಹೇಳಿ!

ಇದೊ, ಇವನೊಂದು ಕುಲ—ನೆವಮಾತ್ರಕೆ! ನೋಡಿ, ಅವನ ಮುಸಿಗಪ್ಪು ಮೈಬಣ್ಣ. ಗೂನುಬೆನ್ನಿನ ಕಡ್ಡಿಕಾಲಿನ—ಹುಳುಕು ಮೋರೆಯ ಹಲ್ಲುಬ್ಬ—ಮೆಳ್ಗಣ್ಣ—ಅರುವತ್ತ ದಾಟಿರುವ ಕನಕಪುರದ ಕಲಿ ಕಾಮನನು ನೋಡಿ! ಹೊಲೆ ಹೊಲೆತಿಗೂ ಬೇಡದಿವನ ಮುದ್ದು ಹೆಸರು—ಕೃತಯುಗದಿ ಒಬ್ಬಳೇ ಮಡದಿ ಸಾಕೆಂದವನ ಹೆಸರು!—ರಾಮು! ರಾಮು!! ಹೆಣ್ಣೆಂದರಾಯ್ತು!—ದಿನಕೆ ನೂರು ಸಲ ಹೆಸರಿಗವಮಾನ ಗೈಯುವನು—ಕಂಡ ಕಂಡವಳನೆಲ್ಲ ಬಯಸಿ—ಕೆಣಕಿ! ಮುಖತುಂಬ ಛೀ!—ಗುಟ್ಟೆ ಅವರುಗುಳೆ, ನಾಯಿಯಂತದನೆ ನೆಕ್ಕಿ ನಲಿಯುವ ಈ ಕನಕಪುರದ ಕುಸುಮಾಯುಧನ ಕುಲ ಯಾವುದು?—

—ನೀವೆ ಹೇಳಿ.

ಓ, ಅಲ್ಲಿ ನೋಡಿ! ಎಲೆಯ ಮೆಲ್ಲುತ್ತ—ಅತ್ತಿತ್ತ ನೋಡುತ್ತ—ಬಿನ್ನಾಣದಲಿ ಬಳುಕುತ್ತ—ಕೇಕೆ ಹೊಡೆದು ನಲಿಯುತ್ತ—ಊರ ಘಟಿಂಗರ ನಡುವೆ ಮೆರೆಯುತಿರುವಾ ಊರ ರತಿ—ನಲವತ್ತರ ಹಸ್ತಿನಿಯ ನೋಡಿ! ಮೂರು ಹೆಂಡಿರ ಬಾಳಗೆಡಿಸಿದ ಭಂಡನಿವಳಿಗಾರನೆಯ ಭರ್ತಾರ! ಸಾಲದೆಂದಾಗಲೇ ಮತ್ತೊಂದ ಹಿಡಿಯೆ ಬಲೆಯ

ಬೀಸುತಿಹ—ಅಗ್ನಿ ಜೆಯ ಅಕ್ಕ!-ಬೆಸ್ತರ ಬೋರಿಯ ಬದುಕಿನ ಬಣ್ಣ ಯಾವುದು ?—

—ನೀವೆ ಹೇಳಿ.

ಇಗೊ, ಇಲ್ಲಿ ಬರುತಿಹನು—ಪಾಪ !—ತನ್ನ ಹುಟ್ಟಿಗೆ ಕಾ ಣರು ಯಾರೆಂಬುದನೆ ಅರಿಯದ—ಕನಕಪುರದ ಚಂದ್ರಹಾಸ! ನಿಷಿದ್ಧ ಫಲದ ರುಚಿನೋಡೆ—ಪಾಪದ ಬಿತ್ತಕೊಂದು ಕ್ಷಣ ನೆಲವಾಗಿ— ಕಳ್ಳತನದಲಿ ಹೆತ್ತಿಟ್ಟು ತಲೆಮರೆಸಿಕೊಂಡೋಡಿದ ಯಾವಳೋ ವಿಧವ ಯೋರ್ವಳಿವನ ಪಡೆದಾಕೆಯಂತೆ. ಬೆಳೆಯುತ್ತ ಊರಪೋಲಿಗ ಸಲಗನಾಗಿ—ಕಳವು, ದರೋಡೆ—ಹೊಡೆದಾಟ ಕಚ್ಚಾಟಗಳಿಗೆ ಹ ಲಿರುಳು ನಿಜಬಾಹುಬಲದಾನಿ—ಕನಕಪುರದ ಈ ಹೊಸ ಕರ್ಣ— ಹೆಸರಿಗೆ ಊರಗೌಡನ ಜೀತದಾಳಂತೆ-ಕಸಬಿಂದ ಕುಲ ಯಾವುದು?—

—ನೀವೆ ಹೇಳಿ.

ಅದೋ, ಅಲ್ಲಿ ಕಾಣುವುದು-ಹರಕುಮನೆ-ನಿಂಗನದು. ಆಲೈಸಿ ಕೇಳಿ! ಅಲ್ಲಿ ನಡೆಯುತಿದೆ ಮಸಲತ್ತು !—ದಾಯಾದಿ ಮುದ್ದನ ಮನೆಯ ಮುರಿಯೆ ಮಸಲತ್ತು !

ಇಲ್ಲಿಣಿಕಿ ನೋಡಿರೀ ಇತ್ತ. ಮನೆಯ ಹಿತ್ತಿಲಲಿ ಗುಟ್ಟಾಗಿ ಮಸೆಯುತಿಹನು ಮಚ್ಚೊಂದ—ಮುದ್ದ ! ಬಂತು—ಬಂತು ! ನಿಂಗನ ತಲೆಬುರುಡೆಗೆ ಹೊತ್ತು !

ಓಹೋ ! ಏನದು ಗುಂಪು—ಗಲಾಟೆ ! ಯಾವ ನೋಟ ? ಬ ಸಾರಿ ನೋಡುವಾ ಬನ್ನಿ ಬೇಗ !

ಕನಕಪುರದ ಮಂದಿ ಕೈತಟ್ಟಿ ಉಘೇ !—ಎಂದುಲಿಯುತಿರೆ— ಭೀಮ ದುರ್ಯೋಧನರಂತೆ—ಕಾಳಿಗದ ತೆಕ್ಕೆಯಲಿ ಕೂಗಿ ಬೈದಾಡಿ— ಮುಡಿಯ ಎಳೆದಾಡಿ—ಉಡಿಯ ಸೆಳೆದಾಡಿ—ಮೂರುಕಾಸಿನ ಮಾತಿಗೆ ಮಾನವನು ತೂರಾಡುತಿಹ ರಂಗಿ ನಿಂಗಿಯರಾರು ಬಲ್ಲಿರಾ ? ಕನಕ ಪುರದ ಮಂದಿ ಸಾಕಿರುವ ಬೀದಿ ಬಸವಿಯರು !

ಇವನ ದನ ಅವ ಕದ್ದುಮಾರಿದ—ಬೀರನ ಕಾಮುಕೆ ಬೋರನ ಹೆಣ್ಣು ಗುರಿ—ಕೆಂಪಿ ಕದ್ದಳು ತಿಮ್ಮಿ ಸೀರೆಯ—ಸಿದ್ದಿ ಕದ್ದಳು ಕೆಂಪಿ

ಕೋಳಿಯು--ಹನುಮ ಕೆಣಕಿದ ಈರಿಯು; ಯಾತಕೋ ಕೆರೆಗೆ ಬಿದ್ದಳು ಹೊನ್ನಿ—ಯಾರಿಗೋ ವಿಷವ ಕೊಟ್ಟಳು ಚೆನ್ನಿ—ಇದೆ ಆಯ್ತು ಮಾತುಕಥೆ ಮನೆಮನೆಯಲಿ—ಬೀದಿ ಬೀದಿಯಲಿ-ಬೆಳಗಿಂದ ಸಂಜೆವರೆಗೆ!—ಸಾಕು ಸಾಕೀ ಕನಕಪುರದ ಭಾರತಕೆ ಕೊನೆ ಮೊದಲು ಎಲ್ಲಿ?

*       *       *       *

ನಾಲ್ಕು ದಿನಗಳಿಗೆ ಸಾಕಾಗೆ ಆ ಊರ ಕಣ್ಣೊಲಸು—ಕಿವಿ ಹೊಲಸು—ಹೊಲಸು ವಾಸನೆಯೆನಗೆ, ಐದನೆಯ ಸಂಜೆಯಲಿ ಹೊರಟೆ ಬೇರೊಂದು ದಿಕ್ಕಿನಲಿ--ಕನಕಪುರವನು ಬಿಟ್ಟು.

*       *       *       *

ಒಳಿತು—ಸೊಗಸು—ಅಮಲತೆ-ಕೋಮಲತೆಗಳೆಲ್ಲ ಕನಕಪುರದ ಗಡಿಯಾಚೆಯೋ ಎಂಬಂತೆ, ಹಳ್ಳಿಯ ಹೊರವಲಯದಲೆಸೆದಿತ್ತು—ತರತರದ ಜಲಕುಸುಮಗಳಿಂದಿಡಿದ—ಥಳಥಳಿಸುವ ತಿಳಿನೀರ—ಕಿರುದೆರೆಯ ಸಣ್ಣ ಕೆರೆಯೊಂದು—ಸಂಜೆಯ ಹೂಬಿಸಿಲಿನ ಹೊಂಬಣ್ಣದಲಿ ಮಿಂದು.

ಕೆರೆಯ ಏರಿಯ ಮೇಲೆ, ಹಸುರು ಕೊಡೆಯಂತೆ ಎಲೆತುಂಬಿ ಹರಡಿ—ಇದಿರ ನೋಟಕೆ ಮನಸೋತು ತಲೆದೂಗುತಾ ನಿಂತಿತ್ತು ರಮಣೀಯ ಹೊಂಗೆಮರವೊಂದು.

ಆ ಮರದಡಿಗೆ ಸಾರಿದೆನು--ಕ್ಷಣಹೊತ್ತು ಕುಳಿತು ಬೇಸರವ ಕಳೆವೆನೆಂದು—ನೋಡಿ-ಕೇಳಿದ-ಕನಕಪುರದ ಹೊಲಸ ತೊಳೆವೆನೆಂದು.

ಮರದ ಬುಡವನು ಒರಗಿ—ಮೆಲುಗಾಳಿಗೆ ಮೈಯೊಡ್ಡಿ ಕುಳಿತೆ ಕೆರೆಯ ಸೊಬಗನು ಸವಿಯೆ.

ಮಂದಾನಿಲನ ಮೋಹದ ಮುತ್ತಿಗೆ ಪುಳಕಿತಳಾದಳೊ ಜಲದೇವಿಯೆನೆ—ಕೆರೆಯಲಿ ಮಾಲೆ ಮಾಲೆ ಕಿರುದೆರೆಗಳ ಸಾಲು—ಸಾಲು—

ಸಂಧ್ಯಾಗಗನಮಣಿಯ ಕನಕಾಭಿಷೇಕದಲಿ ತಲೆದೂಗಿ ನಳನಳಿಸುವ ನಾನಾವರ್ಣದ ನೀರುಲಿಲ್ಲಿಗಳ ಲೀಲಾವಿಲಾಸ—ವಿನೋದ—

ಪರಿಪರಿಯ ನೂರಾರು ನೀರುಹಕ್ಕಿಗಳ ಜಲಕೇಳಿಯ ಕಲರವ

ಗಾನ-ಸುವ್ಮಾನ—

ಆಲಿಸಿ ಕೇಳಲು—ಅಮೃತೋನ್ಮತ್ತ ಅಳಿಕುಲದ ಅವಿರಾಮ ಝೇಂಕಾರದೋಂಕಾರ-ಕುಸುಮಶರನ ಬಿಲ್ಲ ಠೇಂಕಾರ!—

ತಿಳಿಗಾಳಿಯಲಿ ಅಲೆಯುಲೆಯಾಗಿ ತೇಲುತ ಬಂದು ಮುತ್ತಿ ಮುಸುಕುತಿದ್ದ—ಅಪರಿಚಿತ ಪರಿಮಳಗಳ ಮಾಯಾಜಾಲ—ಮಹೇಂದ್ರ ಜಾಲ!—

—ಇವುಗಳಲಿ ತೊಡೆದು ಹೋದವು ಕೊಚ್ಚಿ, ಕನಕಪುರದ ಕೊಳ ಕೆನ್ನ ಕಣ್ಣು ಕಿವಿ ಮೂಗುಗಳಿಂದ-ಮನದಿಂದ.

ಅಂತೆಯೇ ಎವೆಗಳನು ಅರೆಮುಚ್ಚಿ ಇದಿರ ರಮಣೀಯ ನೋಟ ವನು ನಾನೋಡುತಿರೆಯಿರೆ—ಅಲ್ಲಿ—ಕೆರೆಯ ಮಧ್ಯದಲಿ ಕಂಗೊಳಿ ಸಿತೊಂದರೆಬಿರಿದ ಹಿರಿಯ ಹೊಂದಾವರೆ-ಕುಸುಮಗಳ ರಾಣಿ-ಕೆರೆಗೆಲ್ಲ ಒಬ್ಬಳೇ ಆಗಿ-ಕಣ್ಮರೆಯಾಗಲಿಹ ಸಖನ ವಿರಹಕೆ ಖಿನ್ನಳಾಗಿ-ಶಿರವ ನಸುಬಾಗಿ.

ಅದ ನೋಡನೋಡುತ ಹೊಮ್ಮಿತೆನ್ನೆದೆಯಿಂದ ಉದ್ಗಾರ ವಿಂತು —

" ಆಹಾ! ಕನಕಪದುಮಾ!—ನಯನ ಮನೋಹರೇ!—ಕ್ಷೀರ ಸಾಗರದಿ ಪುಟ್ಟಿ—ಕನಕದೇವಿ—ಕಲಾದೇವಿಯರ ಕೆಳೆತನದಿ ಬೆಳೆದು— ಮೂರು ಮೂರುತಿಗಳ ಧರಿಸಿ ಪಾವನೆಯಾಗಿ—ಮಾಧವಗೆ ಹೊಸ ಹೆಸ ರಿತ್ತ ಸುಮದೇವಿಯ ಅಮಲಕುಲಜಾತೆಯಾಗಿಯೂ ನಿನಗೇಕೆ ಸಂದುದೀ ಹೊಲಸು ಹಾಳೂರ ನೆರೆಯ ವನವಾಸದೊಂಟಿತನವಯ್ಯೋ!

ಪಶುಕಾಮಕೂಪದಲಿ ಮುಳುಗಿರುವ ಕನಕಪುರದ ಪಾಪಿಕುರುಡ ರಿಗೆ ನಿನ್ನ ರೂಪು ಲಾವಣ್ಯಗಳು ಕಾಣುವುದು—

—ಎಂತು?

ಮನಹೊಲಸು, ಮೈ ಹೊಲಸು, ಉಟ್ಟುತಿನ್ನುವುದೆಲ್ಲ ಹೊಲಸು ಹೊಲಸಾದ ಕನಕಪುರದ ಕೊಳಕರಿಗೆ ನಿನ್ನಮಲತೆಯ ಸಂದೇಶ ಸೋಂಕುವುದು—

—ಎಂತು?

ಹಗಲಿರುಳು ತಿಪ್ಪೆಯಲಿ ಹುಟ್ಟಿ ಅಲ್ಲಿ ಬೆಳೆದಲ್ಲೆ ಸಾಯುವಾ ನಂಜು ನೊಣಗಳಿಗೆ ನಿನ್ನೆದೆಯಮೃತವನು ಸವಿಯೆ ನಾಲಗೆಯು—

—ಎಲ್ಲಿ ಬಂತು?

ಎದೆಯೆಲ್ಲ ಕಲ್ಲಾಗಿ—ಮನವೆಲ್ಲ ಮುಳ್ಳಾಗಿ—ಬಾಳೆಲ್ಲ ಪಾಷಾಣ ವಾಗಿರುವಾ ಕಠಿಣ-ಕೊಲೆಗಡುಕರಿಗೆ ನಿನ್ನ ಕೋಮಲತೆಯು ಅರ್ಥ ವಾಗುವುದು—

—ಎಂತು ?

ಹಾಯ್ ! ಏಕಾಂಗಿ !—ಕನಕತಾವರೆ—ಸುಧಾಸಾಗರೆ—ರೂಪು ಲಾವಣ್ಯಗಳಾಗರೆ !—

ಹೇಮದಳರನ್ನೆ—ವಿಮಲಕುಲಸಂಪನ್ನೆ—ದಿನಮಣಿಯ ಮನ ದನ್ನೆ !—

ಅಮಲಕೋಮಲ ಮುದ್ದುಮಣಿ—ಪರಿಮಳದ ಗಣಿ—ಕುಸುಮ ಲೋಕದ ಪಟ್ಟದ ರಾಣಿ !—

—ಹಂದಿಗಳಿದಿರಲಿ ಚೆಲ್ಲಿದಾಣಿ ಮುತ್ತು ಗಳಂತಾಯ್ತೆ ನಿನ್ನ ಬಾಳಿಲ್ಲಿ—ಅಕಟಕಟಾ !—ಬಟ್ಟೆ ಬಯಲಾಗಿ— ಈ ಹಾಳು ಕನಕಪುರದ ನೆರೆಯಲ್ಲಿ !"

* * *

ಅಂದಿನಾ ಸಂಜೆಯಲಿ, ನಾನಿಂತು ನಿಡುಸುಯ್ದು—ಮನಕರಗಿ ನೆರೆಮರುಗಿದೆನು—ಕನಕಪುರದ ಗಡಿಯಾಚೆ ಕೆರೆಯಲ್ಲಿ ಏಕಾಂಗಿಯಾಗಿ ರ್ದಾ ಕನಕತಾವರೆಯ ಬಾಳ ನೋಡಿ—ನೋಡಿ !

# ೧೭. ಕಾಲಗತಿ

ಸರಿರಾತ್ರಿ!

ಕಾರಾಗಾರದ ಕತ್ತಲೆಗುಹೆಯುಲಿ, ಹತ್ತುದಿನಗಳಿಂದ ಕಾಯುತಿಹನೊಬ್ಬ—ಕೊಲೆಪಾತಕ—ನಿಷ್ಠುರಶಾಸನಕೆ ಕಟ್ಟಕಡೆಯ ತಪ್ಪುಗಾಣಿಕೆಯನೊಪ್ಪಿಸೆ—ಕಂಗೆಟ್ಟು ಕಾಯುತಿಹನು.

ನಾಳೆಯ ಮುಂಬೆಳಗು—ವಿಷಘಳಿಗೆಗೆ ಸಲ್ಲುವ ಯಮಲಗ್ನದಲಿ—ಮಿಣಿಮಾಲೆಯ ಬಿಗಿದು ವರಿಸುವಳಿವನ ಕಾಲಾಂಗನೆ! ಶಾಸನಶಾಸ್ತ್ರಿಯ ಕರಾಳಮಂತ್ರಘೋಷದಲಿ!

"ಆಹಾ! ಎವೆಮುಚ್ಚಿ ತೆರೆವುದರಲಿ ಸಂದುಸಾಗಿಹವು-ಮುಂಬೆಳಗು, ನಡುಹಗಲು—ಸಂಜೆ, ಸರಿರಾತ್ರಿಗಳು!—ಏನು ಮಿಂಚುತಿಹುದು ಕಾಲ!

ನೆನ್ನೆ ರವಿವಾರದಂತಿದೆ; ಇಂದಾಗಲೇ ಶನಿವಾರ! ನಡುವೆ ನುಸುಳಿ ಓಡಿಹವೈದು ದಿನ! ಅಯ್ಯೋ! ಎಂತು ಹೊಂಚುತಿಹನೆನ್ನ ಕೊರಳಿಗೆ—ಕಾಲ!

ಹಗಲಿರುಳುಗಳು—ಕಾಲಸಾಗರದಲೆಗಳು!-ಉರುಳುರುಳಿ ಬರುತಿಹವುಧಾವಿಸಿ!—ತಿಂದುತೇಗೆ, ಅಬ್ಬರಿಸಿ ನುಗ್ಗಿಬರುತಿಹ ಹೆಬ್ಬುಲಿಗಳು!"

—ಎಂದಾ ಕಡುಪಾಪಿ ನಡುಗುತ್ತ ನಿಂತಿಹನು—ಗುಹೆಯ ಗೋಡೆಗೆ ಬೆನ್ನೊತ್ತಿ—ನಾಳೆ ಬೆಳಗಾಗುವುದ ತಡೆವೆನೆಂದು—ಕಣ್ಣೆವೆಯಿಕ್ಕದೆ!

* * *

ಅದೆ ಕಾರಾಗಾರದಲದೆ ಸರಿರಾತ್ರಿ.

ಇನ್ನೊಂದು ಖಾನೆಯಲಿ—ರೆಕ್ಕೆಗಳ ಕೊಡವುತ್ತ ಕಾದಿಹನು ಇನ್ನೊಬ್ಬ ಖೈದಿ—ಮೂವತ್ತು ದಿನಗಳ ಸಜವ ಮುಗಿಸಿ—ಶಾಸನವು

ಹೊರೆಸಿದ ಋಣದ ಭಾರವನಿಳುಹಿ—ಸಂಕೋಲೆಗಳ ಕಳೆಯೆ ಕಾದಿಹನು.

“ ನಾಳೆ ಬೆಳಗಿನಲಿ ಬಿಡುಗಡೆಯ ಪಡೆಯುವೆನು!

ಅಬ್ಬ! ಇನ್ನೇನು! ಮೂವತ್ತು ದಿನಗಳ ಕಳೆದೆನಲ್ಲ!

ಕ್ಷಣವೊಂದು ದಿನವಾಗೆ—ದಿನವೊಂದು ವರುಷವೆನೆ, ತಿಣಿತಿಣಿಕಿ ಉಸಿರಿಡಿದು—ಎಂತು ತಳ್ಳಿದೆನೋ ವರುಷ ವರುಷವ!

ಹೇಗೆ ಮುಟ್ಟಿದೆನೋ ಕಡೆಯ ವರುಷದ ಕೊನೆಯ ದಿನದೀ ತುತ್ತತುದಿಯ!

ಆದರಯ್ಯೋ! ಉಳಿದಿಹವು—ಇನ್ನೂ ಎಂಟು ಗಂಟೆಗಳು!—ಸಾಲದ ಬಾಲ—ಅಸಲಿಗೆ ಸಾಸಿರವಾಗಿ ತೋರುತೆ!

ಕಾಲ ಹರಿವುದಂತೆ! ಕಾಲ ಪುರುಷನಂತೆ!! ಕಾಲ ರಥವಂತೆ-ಚಕ್ರವಂತೆ! ಕಾಲವಾಹಿನಿಯಂತೆ!

ಛೆ! ಛೆ! ಸುಳ್ಳು—ಸುಳ್ಳು! ಹರಿಯುತಿಲ್ಲ ಕಾಲ!—ಕಲ್ಲಾಗಿ ಎಲ್ಲೋ ಬಿದ್ದಿಹುದು ನಿದ್ದೆಯಲಿ!

ಕಾಲಪುರುಷನ ಕಾಲೆರಡೂ ಕುಂಟೋ?-ಅವನ ರಥ ಮುರಿದು ಚಕ್ರಹೂತಿಹುದೋ?

ಹರಿಯುವುದ ಮರೆತು—ಕಾಲವಾಹಿನಿ ಎಲ್ಲೋ ನಾರುವ ಕೆಸರಾಗಿ ನಿಂತಿಹುದೋ?

ಆಹಾ! ಇನ್ನೆಂಟೆಗಂಟೆಗಳು! ಆದರೆಂದಿಗೂ ಕರಗದ ಕಗ್ಗಂಟುಗಳು! ಕಾಲ ಹೆಳವಾಗಿ ತೆವಳುತಿರೆ ಎಂಟುಗಂಟೆಗಳಲ್ಲ! –ಅಷ್ಟಯುಗಗಳು!

ನಾಳೆ ಬರುವುದೇ? ಬೆಳಕು ಹರಿವುದೇ? ನನಗೆ ಬಿಡುಗಡೆಯೆಂಬುದು ದೊರೆವುದೇ?—ನಿಜವಾಗಿ!

ಇಲ್ಲ—ಇಲ್ಲ! ಇನ್ನು ನಾಳೆಯಿಲ್ಲ! ನನಗೆ ಬಿಡುಗಡೆಯ ಬೆಳಕಿಲ್ಲ!

ರಥಮುರಿದು ಕೆಸರಲ್ಲಿ ಹೂತಿರಲು ಚಕ್ರ, ಹೆಳವ ಸಾರಥಿ ತರುವನೆಂತು ಬಿಡುಗಡೆಯ ನನಗೆ!

ಅಯ್ಯೋ! ಎಂದಿಗೂ ಬರದ ನಾಳೆಯೋ!

ಈಯೆಂಟು ಗಂಟೆಗಳು ಕುಂಟುತ್ತ ಸರಿಯುವ ಮುನ್ನ ನನಗಾಗುವುದೊ ಎಂಭತ್ತು ವರುಷಗಳು ಇಲ್ಲೆ?

ಇಲ್ಲೆ ಸಾಯುವೆನೊ?—ಹುಡಿಯಲ್ಲಿ ಬೆರೆಯುವೆನೊ?—ಹುಳುಗಳಿಗೆ ತುತ್ತಾಗುವೆನೋ—ಇಲ್ಲೆ?"

—ಎಂದಡಿಗಡಿಗು ನಿಡುಸುಯಿಲ ಬಿಡುತಿಹನು-ಕ್ಷಣ-ನಿಮಿಷ-ಗಂಟೆಗಳ ಮುಗ್ಗಿಯು ಮೆಲಕುತ!

ಇಂತಾದರೂ ಅವರೀರ್ವರನೂ ಒಂದೆ ಗತಿಯು ಕಾಲವಾಹಿನಿ ತೇಲಿಸಿಕೊಂಡು ಸಾಗುತಿಹುದು—ಸರಿರಾತ್ರಿಯಲಾ ಕಾರಾಗಾರದಲಿ.

# ೧೮. ಬಾಳೂರು

ಬಾಳೂರ ಕತೆಯಿದು.

ಮಾವೂರು, ಬೇವೂರು, ಹಾಲೂರು,

ಮಾಲೂರು ಬೇಲೂರು ಮೈಸೂರು—ಎಂಬಂತೆ—

—ಒಂದೂರು ನಮ್ಮ ಬಾಳೂರು.

ಊರ ಕುಬೇರಕುಲ ವಸತಿ, ಬಾಳೂರ ಉತ್ತರದ ವಿಸ್ತರಣ, ಹೆಸರಾದ ರಮಣೀಯ ರಮಾಪುರ—

—ನಮ್ಮ ರಮಾಪುರ.

ಹಗಲಿರುಳು ಎಡೆಬಿಡದೆ ನಾಣ್ಯಗಳ ಠಣ್-ಠಣ್ ತಾಳಕೆ ತಾಂಡವವಾಡುವ ರಮೆಯ ನೂಪುರಮಾಯಾರವದಿ ಮೂಡಿತ್ತು ರಮಾಪುರ-ನಮ್ಮ ರಮಾಪುರ.

"ಸಿರಿವಿಲಾಸ"-"ಶ್ರೀನಿವಾಸ"-"ಲಕುಮಿನಿಲಯ"—"ಪದುಮಾಲಯ"—"ಕನಕಮಂಟಪ"—"ಸ್ವರ್ಣಮಂದಿರ"—ಎಂಬೀ ಹೆಸರುಗಳಿಂದ—

ನಾನಾ ವರ್ಣ ವಿನ್ಯಾಸದಲಿ, ವಿವಿಧ ಮನೋಹರಾಕೃತಿಗಳಲಿ, ಸ್ಪರ್ಧಿಸುತ ಗರ್ವದಲಿ ರಂಜಿಸುವ ಗೋಪುರಗಳಿಂದ, ಬಡತನವ ಮೆಟ್ಟಿದಟ್ಟಹಾಸದುಪ್ಪರಿಗೆಗಳಿಂದ, ವೈಭವವ ಕೂಗಿಸಾರುವಾ ಮಹಲುಗಳೋ, ಭವ್ಯ ಭವನಗಳೋ, ಐಸಿರಿಯ ಸುಮ್ಮಾನದ ಸೌಧಗಳೋ—

—-ಬಿತ್ತರದ ರಮಣೀಯ ನಂದನಗಳ ನಡುವೆ, ಎತ್ತರದ ಪ್ರಾಕಾರ ರಕ್ಷಿತವಾಗಿ—ಮೆರೆಯುತಿಹವಲ್ಲಿ ರಮಾಪುರದಲ್ಲಿ—ನಮ್ಮ ರಮಾಪುರದಲ್ಲಿ.

ಇಕ್ಕೆಲದ ಮಹಲು, ಮಂಟಪ, ಉಪ್ಪರಿಗೆ ಗೋಪುರಗಳ ಸಾಲದಡಗಳ ಮಧ್ಯೆ ರಂಜಿಸುತಿಹವಲ್ಲಿ ನಿರ್ಮಲ ವೀಧಿಗಳು ಧೀರಗಂಭೀರ ವೈಶಾಲ್ಯದಲಿ, ಹೊನ್ನಹೊಳೆಯ ಪಾತ್ರಗಳೋ ಎನೆ ಕಣ್ಗೆಡ್ಡವಾಗಿ.

* * * *

ಕತೆಯ ದಿನ ಶನಿವಾರ.

ಶನಿವಾರ ಭಿಕ್ಷುಕರ ವಾರ!

ದಿನ ದಿನವು—ಹಗಲಿರುಳು ಹೊಟ್ಟೆಯ ಹಸಿವಿನನಲು ಧಗ ಧಗಿಸುತಿರೆ ಅಂಗಾಂಗಗಳ, ಚಿಪ್ಪಿಡಿದು ಬೇಡುವೀ ಭಿಕಾರಿಗಳಿಗೆ ವಾರ ತಿಥಿಗಳ ಪಂಚಾಂಗವೇಕೋ ಎನಿಪುದು ದಿಟ! ಆದರೂ ಅವರೊಳಿಹು ದೊಂದಲಿಖಿತನಿಯಮ—ಬೇಡುವುದಕೆ ಶನಿವಾರ ಶ್ರೇಷ್ಠವೆಂದು.

ರಮಾಪುರದ ಮೇಲಂದು ನಡೆದಿತ್ತು ಬಾಳೂರ ತಂಡೋಪತಂಡ ಭಿಕ್ಷುಕರ ಭೀಕರ ದಾಳಿ.

ಜಾತಿಯಲಿ, ವಯಸಿನಲಿ, ವಿರೂಪದಲಿ ವಿಕಟಾಕೃತಿಯಲಂಗ ವಿಕಲತೆಯಲಿ ವೇಷಭೂಷಣಗಳಲಿ, ಬೇಡಿಕೆಯ ಕೂಗು ರಾಗಗಳಲಿ ಎಣಿಕೆಗಳವಲ್ಲದ ವೈವಿಧ್ಯವೆಸೆದಿರೆ—

ವಿರಾಟ ರೂಪವಾಂತನೋ ವಾರದಧಿದೇವ!—ಎಂಬಂತೆ ತೋರು ತಿರ್ದುದಾ ಭಿಕ್ಷುಕಸ್ತೋಮ—ಕಿವಿಕಂಗಳಿಗೆ ಕಠೋರ ಕರ್ಕಶವಾಗಿ— ರಮಾಪುರದಲ್ಲಿ

—ನಮ್ಮ ರಮಾಪುರದಲ್ಲಿ.

* * * *

ಹಿಮಗಿರಿಯ ಸಾಲಿನಲಿ ಗೌರಿಶಂಕರದಂತೆಸೆದಿರ್ದುದೊಂದು ನಯನಮನೋಹರ ಭವ್ಯಭವನ—ಶಗ್ಗದೈಸಿರಿಯ ಬಾಚಿ ಸೂರೆಗೊಳ ಲೆಂಬಂತೆ—ಬಾಂದಳಕೆ ನಿಡಿಗೋಪುರವ ಚಾಚಿ.

ಅಗಣಿತ ದಾಸದಾಸಿಯರ ಸೇವೆಯಲಿ ಮೆರೆಯುತಿದ್ದಾ ಕನಕ ಭವನ ಕಲ್ಲುಸಕ್ಕರೆಯಾಗಿತ್ತು ಬಾಳೂರ ಭಿಕ್ಷುಪಿಪೀಲಿಕಾ ಮಾಲೆಗೆ.

ಕಲ್ಲುಸಕ್ಕರೆ!—ದಿಟ—ಕಲ್ಲುಸಕ್ಕರೆ! ಆದರದು ಕನ್ನಡಿಯೊಳಗಿನ ಕಲ್ಲುಸಕ್ಕರೆ!!

ಸಕ್ಕರೆಯು ಸಿಹಿತನ ಭವನದಲ್ಲಿ! ಅದರ ಕಲ್ಲುತನ ಮಳೆಯಾಗಿ ಮಾಸಲು ಬಾಳೂರ ಭಿಕ್ಷುಕರಿಗೆ!

ಆ ಭವನದುನ್ನತ ಪ್ರಾಕಾರದ ಹೆಬ್ಬಾಗಿಲಲಿ ಕಾವಲಿಹನೊಬ್ಬ ದಾಸ—ಹುರಿಮೀಸೆಯ ದಂಡಪಾಣಿ—ಭಿಕ್ಷುಕರನಟ್ಟುವುದಕೆ; ಅದ ಕಾಗವಗೆ ಕೈತುಂಬ ಸಂಬಳ.

ತಂಡತಂಡವಾಗೈತಂದು, ಬೈಸಿಕೊಂಡು ಹೊಡೆಸಿಕೊಂಡು, ತಳ್ಳಿಸಿಕೊಂಡು ಗದರಿಸಿಕೊಂಡು, ಗೊಣಗುತ್ತ ಶಪಿಸುತ್ತ ಹೋಗಿತ್ತು ಆ ಹೆಬ್ಬಾಗಿಲಿಂದ—ಬಾಳೂರ ತಿರುಕರ ದಂಡು—ಬೆಳಗಿನಿಂದ ನಡು ಹಗಲವರೆಗೆ.

ಇನ್ನೇನು ಮೀರಿತು ಭಿಕ್ಷುಕರು ಬರುವ ಹೊತ್ತೆಂದು ತೋರೆ ಹೊರಡಲೆದ್ದಾ ದಾಸ—ಭಿಕ್ಷುಭಯಂಕರ. ಅನಿತರಲೆ ಕೇಳಿಸಿತು ಹಿಂದೆ:

"ಅಯ್ಯಾ! ಅಪ್ಪಾ! ಧರಮುರೇ—ತಾಯಿತಂದೇ!
ಪಾಪಿ ಪರದೇಶಿಗೊಂದಿಷ್ಟು ಭಿಕ್ಷಾ ನೀಡೀ"—

—ಎಂದು ಕಲ್ಲನೂ ಕರಗಿಸುವ ದನಿಯೊಂದು.

ತಿರುಗಿ ನೋಡೆ ದಾಸ, ಕಂಡ—

—ಮೈಗೆಲ್ಲ ಒಂದೆ ಚೂರು ಚಿಂದಿಯುಟ್ಟು, ಕೈಯಲೊಂದು ಚಿಪ್ಪುಹಿಡಿದು ಕಬ್ಬಿಣದ ಹೆಬ್ಬಾಗಿಲ ಸರಳುಗಳಿಗೆ ಒಣಮೊಗವ ನೊತ್ತಿ ನಿಂತಿದ್ದ ಕಂಗೆಟ್ಟ ಕ್ಷಾಮಿನಿಯೋರ್ವಳ—ಕಂಡ ದಾಸ.

"ತೊಲಗು!—ತೊಲಗಾಚೆ!"—ಎಂದು ಬೊಗಳಿತು ಬೆಳಗಿಂದ ಭಿಕ್ಷುಕರನಟ್ಟಿಯಟ್ಟಿ ದಣಿದಿದ್ದಾ ದಾಸಶ್ವಾನ, ಕೆರಳಿ ಕಂಗಳನರಳಿಸಿ.

ಕಸಬಿಗೊಪ್ಪಿದ ಮೊಂಡತನದಿಂದಾ ತಿರುಕಿ,—

"ಅಯ್ಯಾ! ಅಪ್ಪಾ! ಧರಮುರೇ—"

—ಎಂದು ಮತ್ತೊಮ್ಮೆ ಸೊಲ್ಲೆತ್ತೆ, ಕರುಣಾರಿದಾಸ ಮರುಮಾತಿಲ್ಲದೆ ಹಾರಿ ಬಂದವಳ ನೊಂದೆದೆಗೆ ತನ್ನ ಕೈದಂಡವನಿಟ್ಟುನೂಕಿದ—ಪರಮಪಾಪಿ.

ತತ್ತರಿಸಿ ಹಿಂದಕೆ ಬಿದ್ದಳಾ ಬಡಪಾಯಿ, ಕೈಯಚಿಪ್ಪು ಜಾರಿ ನೆಲಕುರುಳಿ—ಹಿಡಿಕಾಳು ಹುಡಿಯಲ್ಲಿ ಬೆರೆತುಹೋಗಿ.

ತನ್ನ ದಿನದ ಈ ಕಟ್ಟ ಕಡೆಯ ಮಹತ್ಕಾರ್ಯವನೆಸಗಿ ಹೊರಟು ಹೋದ-ಕೈದಂಡವ ಬೀಸುತ್ತ ಮೀಸೆಯ ಸವರುತ್ತ ಆ ಕನಕಭವನದ

ದಾಸ— ವೀರ.

ಮೆಲ್ಲನೆದ್ದು ಭಿಕ್ಷುಕಳು—ಕಂಪಿಸುತಿರೆ ಒಣಗಿದಾ ದೇಹ, ತುಂಬಿ ಬರೆ ಬಿಸಿನೀರಿಂದ ಗುಳಿಬಿದ್ದ ಕಂಗಳು, ಅಳುತಳುತ ಶಪಿಸುತ್ತ, ಹುಡಿಯ ಸಾಗರದಿ ಕಾಳಮೌಕ್ತಿಕಗಳ ತಡಕುತ್ತ ಕುಳಿತಳಾ ಭವ್ಯ ಭವನದ ಹೆಬ್ಬಾಗಿಲ ಹೊರಗೆ.

ಹೆಬ್ಬಾಗಿಲು !—ಆಹಾ !—ಭವನದೈಸಿರಿಯತುಲತೆಗೊಪ್ಪಿದ — ಸೊಗಸಾದ ಸುಂದರವಾದ ಹೆಬ್ಬಾಗಿಲು ! ಕನಕದೇವಿ ಹೋಗಿಬರುವ ಬಾಗಿಲಲ್ಲವೇ ಅದು! ಬಾಗಿಲಿನಿಕ್ಕೆಲದಲೂ ಮೆರೆದಿದ್ದವೆರಡು ಕಲಾಕೆತ್ತನೆಯ ಶಿಲಾಸ್ತಂಭಗಳು—ಮೌನಗಾಂಭೀರ್ಯದಲಿ, ಮುದ್ದಾದ ಎರಡು ಹೆಸರುಗಳ ಚಿನ್ನದಲಿ ಎತ್ತಿ ಹಿಡಿದು.

ಭವನದೊಡೆಯನ ಹೆಸರೊಂದು—

" ಲಕ್ಷ್ಮೀದಾಸ "—ನೆಂದು

ಭವನದ ಹೆಸರಿನ್ನೊಂದು—

" ದಯಾಸದನ "—ಎಂದು.

# ೧೯. ಕಲ್ಪನಾ

ಯಾವುದೋ ಮಾಯೆಯಲಿ, ಮುಚ್ಚಿದ್ದ ಕಣ್ತೆರೆದು ನೋಡೆ,— ಆಹಾ—

ಏನು ನೋಟ!—ಯಾರ ಆಟ! ಯಾವ ಮಾಂತ್ರಿಕನ ಮಾಟ! ಕಂಗಳಿಗೆ ಎಂಥ ರಸಗವಳದೂಟ!

ಇದಿರ ತಿಳಿಯಾಗಸದಿ ಎರಡು ಮಾರೇರಿದ್ದ ಮೋಡಿಯ ಹೂಡಿದಿಂದ್ರಜಾಲಕನಂತೆ—ಹಿಮಕಿರಣ ಜಾಲವನು ಬೀಸಿ—ಶರದ ಪೂರ್ಣಿಮಾಚಂದ್ರ!

ಎಲ್ಲೆಲ್ಲು ನೀರವತೆ ತುಂಬಿತ್ತು, ಶಾಂತಿ ಮಲಗಿತ್ತು, ತಿಂಗಳಿನ ಹಾಲಿನಲಿ ತಂಗಾಳಿ ಕುಸುಮಗಳ ಕಂಪನು ಬೆರಸುತಿತ್ತು—ನಾದಿ ನಾದಿ ಕಲಸುತಿತ್ತು.

ಈ ಹೊಸ ಮಾಯೆಯಲಿ ಮರಳಿ ಮುಳುಗಿದೆನು ನಾನು—ಎಚ್ಚರವೋ?—ಸವಿಗನಸಿನಚ್ಚರಿಯೋ ?–ನಿಜವನರಿಯದಾಗಿ—ಅರಿಯಲು ಬೇಡವಾಗಿ—ಎರಡರ ನಡುವೆ ತೊಟ್ಟಿಲಂತೆ ತೂಗಿ ತೂಗಿ.

ಈ ಪರಿಯಲೆನ್ನ ತನುಮನಗಳಿಗೆ ಕ್ಷಣಕ್ಷಣಕು ನಾಕಸುಖ ತೋರುತಿರೆ—ಸುಖದ ಸವಿಯೇರುತಿರೆ ಮಾಯೆಯ ಮುಸುಕಿನಲಿ—

—"ಹ! ಏನೋ ಆಕೃತಿ! ಯಾರಲ್ಲಿ?"—

—ಎಂದು ಇದ್ದಕಿದ್ದಂತೆ ನಸುಬೆಚ್ಚಿದೆನು ವೈನವಿರೇಳೆ ಮೋಡಿಯೊಂದನು ನೋಡಿ—ತುದಿಗಾಲಿಂದ ತಲೆವರೆಗೆ ಮರಿಮಿಂಚು ಹರಿದಾಡಿ!

"ಹರೆಯದ ಹೆಣ್ಣು! ಯಾರಿವಳು ಏಕಾಂಗಿ?—ಏಕೆ ಬಂದಿಹಳಿಲ್ಲಿ!—ಬಂದಳೆಲ್ಲಿಂದ?—ಹೇಗೆ ಬಂದಳೀ ಹೊತ್ತಿನಲಿ?"—

—ಎಂದು ಪ್ರಶ್ನೆಗಳು ಮುತ್ತುತಿರೆ ಮನವ, ಕೌತುಕದಿ ನೋಡತೊಡಗಿದೆನು ಎವೆಯಿಕ್ಕದೆ.

" ಈ ಹೆಣ್ಣಿನಾಕೃತಿ—ಹದಿನೆಂಟೊ ಇಪ್ಪತ್ತೊ ವರುಷಗಳ ಹೊಸ ಹರೆಯದ ಕಡುಚೆಲುವಿನ ಮನಮೋಹಕಮೂರುತಿ-ಸೃಷ್ಟಿ ಶಿಲ್ಪಿಯು ಸಾವಧಾನದಿ ರಚಿಸಿದ ಪೂರ್ಣ ಕಲಾಕೃತಿ!—

ಯಾರಿವಳು ?

ತಿಳಿತಂಗಾಳಿಯ ತಂಪಿಗೆ ಘನಿಸಿತೋ ಪೂರ್ಣೇಂದು ಹಿಮ ಕಿರಣ ರಾಶಿ ಕಾಂತಿಮಯ ಕಾಮಿನಿಯ ರೂಪವನು ತಳೆದು!—ಎನೆ ತೋರುವೀ ತರಳೆ—

ಯಾರಿವಳು ?

ಲತೆಯ ನಿಲುವಿನಲಿ ಬಳುಕಿ ನಿಂತಿರುವ ಕೃಶಾಂಗಿ ಲಲಿತ-ಲತಾಂಗಿ—

ಯಾರಿವಳು ?

ಸಿರಿಯೊಡಲ ಗಡಿರೇಖೆಗಳ ನಿಕಟನೇಹದಲಿ ಮೈಗಂಟಿ ಮುಚ್ಚಿರುವ ಅಲೆಯಲೆ ಮಡಿಕೆಗಳ ತಿಳಿಹಳದಿ ಸೀರೆಯಲಿ ರಂಜಿಸುವ ರಮಣೀಯ ಪೆಣ್ಮಣಿ—

ಯಾರಿವಳು ?

ಬಿಚ್ಚಿ ಹರಡಿ ಬೆನ್ನೆಲ್ಲ ಕವಿದಿರೆ ನೀಳು ನೀಳಾದ ಕಮನೀಯ ರಾಶಿ ಕಾಳ್ಮುಡಿಯ ಕಾಮಿನಿ—

ಯಾರಿವಳು ?

ಹೊಸ ತಾವರೆಯು ನರುಗಂಪ ಸೂಸುತಿಹ ಪರಿಮಳದ ಚೆಲುವೆ —ಅರೆ ಬಿರಿದ ಪದ್ಮಿನಿ—

ಯಾರಿವಳು ?

ಮೌನವಾಂತಿಹಳೇಕೆ ? ಅಲುಗದೆಯೆ ನಿಂತಿಹಳೇಕೆ ?—ಯಾವ ಲೋಕದ ಲಲನೆಯಿವಳು?—ತಿರೆಯಂತು ತೌರಲ್ಲ!—ಯಾವ ಗುಡಿಯ ಬರಿದುಗೈದಿಲ್ಲಿಗೈತಂದಿಹಳೊ ದೇವಿ ?—ಕಾಣೆನಲ್ಲ ! "—

—ಎಂದಿಂತು ಮನದಲ್ಲಿ ನನಗೆ ನಾನೇ ಕೇಳುತಿರೆ ಬೆಕ್ಕಸ ಬೆರಗಾಗಿ,—

ಜುಂ !-ಜುಂ !!—ಜುಮ್ಮೆಂದಿತು ಮೈ, ಮೋಹಿನಿಯ ಕೊರಳ ಕೊಳಲಿಂಚರದ ಸರಳು ತಾಗಿ !

“ ಓ, ಗೆಳೆಯ !—ಮುಸುಕಿರಲು ಮರೆವ ತೆರೆ, ಸಹಜವೈ ನಿನಗ ಚ್ಚರಿಯು— ಓ, ಕಥನಕಲಾಸೂತ್ರಧಾರ.

ಬಾ, ನನ್ನ ಮನೆಗೆ ಬಾ—

ಬಳಲಿಕೆ ಬೇಸರಗಳನಲ್ಲಿ ಕಳೆದುಕೋ ಬಾ—

ಹಸಿವು ಬಾಯಾರಿಕೆಗಳ ನೀಗಿಕೋ ಬಾ—

ನಿನ್ನ ಮುಸುಕಿರುವ ಈ ಮರೆವ ತೆರೆಯ ನೋರೆ ಮಾಡುವೆನಲ್ಲಿ- ಬಾ, ಬಾರಾ ! ’’

—ಎಂದಾ ಲಲನೆಯಿತ್ತಳಾ ಹ್ವಾನವನು, ಅಮೃತವಾಣಿಯಲಿ

“ ಇದೋ, ಬಂದೆ ! ನಡೆ ’’—ಎಂದೆ—ಎದ್ದು.

ನೀರೆ ತೇಲಿದಳು ಮುಂದೆ—ಮುಂದೆ.

ನಾ ನಡೆದೆನವಳ ನೆರಳಾಗಿ—ಹಿಂದೆ—ಹಿಂದೆ.

* * *

ತುಂಬುತಿಂಗಳ ಮಾಯೆಯಲಿ ತೇಲಿ ನಡೆಯುತ್ತ ಸಾರಿದೆವು ಸ್ವಲ್ಪ ಹೊತ್ತಿನಲೆ ಥಳಥಳಿಸುತಿದ್ದೊಂದು ತಿಳಿನೀರ ಸರೋವರದ ತಡಿಯ.

ತೀರದಿಂದನತಿದೂರದಿ, ನೀರಮಧ್ಯದಲೊಂದು ಹಿರಿದಾದ ನೀಲೋ ತ್ಪಲವು ಅರೆಯರಳಿ ತುಂಬಿಕೊಳುತಿತ್ತು ಸಾಂದ್ರಚಂದ್ರಿಕೆಯ ಸುಧಾ ವರ್ಷವ. ಅದರ ಕಡೆಗೆ ಬಾಹುಲತೆಯ ಬೀಸಿ ನುಡಿದಳಾ ಮೋಹಿನಿ,—

“ ಅದೋ, ನನ್ನ ಮನೆ ”-ಎಂದು.

ಏನೊ ಮಾಟದ ಹೂಡಿಹಳೆಂದು ಭ್ರಮೆಯಾಂತು ನೋಡುತಿರೆ ಯಿರೆ ಅವಳನೊಮ್ಮೆ-ಮನೆಯನೊಮ್ಮೆ, “ ಬಾ ” ಎಂದು ಮುಟ್ಟಿದಳು ನನ್ನ—ಗಾಳಿಗೂ ಹಗುರಾಗಿ—ತನ್ನ ತಳಿರು ಬೆರಳುಗಳಿಂದ.

ಎಂಥ ಮಾಯೆಯ ಸೋಂಕು ! ಆ ಕ್ಷಣದಲಾದೆವು ಝೇಂಕರಿಸಿ ಹಾರಿ—ನಾನೊಂದು ದುಂಬಿ, ಅವಳೊಂದು ದುಂಬಿ.

ಒಟ್ಟಿಗೇ ಹಾರಿ ಸೇರಿದೆವು, ಶುಭ್ರಸಲಿಲ ಮಧ್ಯದಿ ತಿಂಗಳಲಿ ತೋಯುತಿದ್ದಾ ನೀಲಪದ್ಮಾಲಯವನು.

ಪದರು ಪದರು ದಳಗಳ ನುಸುಳಿ ಹಾಯ್ದು, ಸುಮಹೃದಯ ವಲಯವನು ಸೇರಿ ಕೇಸರತಲ್ಪವ ಸೋಂಕೆ, ಅಳಿದುದೆವ್ಮಾರಡಿಯ ರೂಪವಾಕ್ಷಣ—ಸೋಜಿಗದ ಕನಸಿನಲಿ ನೆರೆಸೋಜಿಗವ ನೋಡಿದಂತೆ !

ಚಿತ್ತ ಭ್ರಮಿಸುತಿರೆ, ಕೊಲ್ಲುತಿರೆ ಕೌತುಕವು, ನಾಡಿನಾಡಿಯಲಿ ರಕುತ ಮಿಂಚುತಿರೆ, ನೋಟಕೆ ನೋಟವನು ಹೆಣೆದವಳ ಕೈತಳಿರ ಹಿಡಿದು ಕೇಳಿದೆನು—

" ಹೇಳು ಹೇಳೆಲೆ ನಾರಿ, ಇಂದು ಇಂತೆನಗೆ ವ್ಯೈದೋರಿ ಮನವ ಕೆಣಕಿ ಭ್ರಮೆಗೊಳಿಸುತಿಹ ನೀನಾರು—ಹೇಳು—ಹೇಳು !!"-ಎಂದು.

" ಹೇಳುವೆನು, ಹೇಳುವೆನು ; ಓ—ನೇಹಿಗನೆ, ಇನಿತು ಅವಸರ ವೇಕೆ ! ಆರಲಿ ನಿನ್ನ ಬಳಲಿಕೆ ಬೇಸರಗಳು ; ಹಿಂಗಲಿ ನಿನ್ನ ಹಸಿವು ದಾಹಗಳು-ಮೊದಲು " —

—ಎಂದಳವಳು.

" ಓ, ಸುಮನಸೆ !-ಎನಗೆ ನಿನ್ನ ಸನ್ನಿಧಿಯಲಿನ್ನೆಲ್ಲಿ ಬೇಸರ, ಬಳಲಿಕೆ, ಹಸಿವು ಬಾಯಾರಿಕೆ ! ಇನ್ನೆಂದಿಗೂ ಮರಳದಂತವು ತೊಲಗಿ ಹವು ! ಈಗವುಗಳನೆಲ್ಲ ಮೀರಿ ಉಳಿದಿಹುದೊಂದೆ !—ಹದ್ದು ಮೀರು ತಿಹ ಹುಚ್ಚು ಕೌತುಕದ ಹಿಂಸೆ! ಕಡೆಗಾಣಿಸದ ನೆಲೆ ಕಾಮರೂಪಿಣಿ"- ಎಂದೆ ನಾನು.

ಬೊಗಸೆಗಂಗಳ ತುದಿಯಲಾನಂದ ಹನಿಗೂಡೆ, ಮೆಲುನಗೆಯ ಮಾಯಾಜಾಲವನು ಬೀಸಿ, ಮೊಗಕೆ ಮೊಗವಿಟ್ಟು ಕೇಳಿದಳು :

" ಓ ಗೆಳೆಯ ಹೇಳು, ವಾಗ್ದೇವಿ ವಾಣಿ ಯಾರೆಂಬುದನು ಬಲ್ಲೆಯಾ ?—ಹೇಳು "—ಎಂದು,

" ಆಹಾ ! ಏನು ಮಾತೆಲೆ ಚೆಲುವೆ ! ತಿಳಿಯದೇ ! ವಾಣಿ— ಬ್ರಹ್ಮನ ರಾಣಿ ".

" ಅವಳಂತೆ ನಾನೊಬ್ಬ ವಾಣಿ ".

" ಯಾರವನು ನಿನ್ನ ಚತುರಾನನ ?"

" ವರುಷಗಳ ಹಿಂದೊಂದು ದಿನ ಮಧುಮಾಸದರುಣೋದಯದಿ ಏಕಾಂಗಿ ತರುಣನೊರ್ವನು ಬಂದೀ ಸರಸಿಯಂಚಿನಲಿ ಕುಳಿತು, ಆನಂದ

ಪರವಶನಾಗಿ, ಕಲ್ಪನೆಯ ಕಡೆಗೋಲಿನಿಂ ಮಥಿಸೆ ನಿಜಮನೋಸಾಗರವ, ಘನಿಸಿದೆನು ಇಂತು—ನಾನವನ ಮನಸಿಜೆ."

"ಅಹಾ! ನೆನಪಾಯ್ತು—ನೆನಪಾಯ್ತು! ನಿನಗೆ ನಾನಂದು ಹೆಸರಿಟ್ಟು ಕರೆದೆ ನನ್ನ 'ಕಲ್ಪನಾ'—ಎಂದು".

ಹೊಳೆವ ಕಂಗಳನರಳಿಸುತ, ಸಿರಿಗೊರಳ ನಸುಕೊಂಕಿಸಿ, ಮೆಲುನಗೆಯ ಅಧರ ಮಧುವಿನೊಳದ್ದಿ, ಭ್ರೂಧನುವಿಗೇರಿಸಿ ಬಿಟ್ಟಳು ಪ್ರಶ್ನೆಯಂಬೊಂದನು,—

"ತಿಳಿಯಿತೇ ಈಗ?—ಯಾರೆನ್ನ ಚತುರಾನನ!"—ಎಂದು.

"ತಿಳಿಯಿತು!—ತಿಳಿಯಿತು! ಓ, ಎನ್ನ ಕಲ್ಪನಾ,

ಇನ್ನೆಂದಿಗೂ ತೊರೆಯದಿರೆನ್ನ—ಓ ಎನ್ನ ಮುದ್ದು ಕಲ್ಪನಾ,
ಸ್ಥಿರವಾಗಿ ನೆಲಸೆನ್ನ ಹೃದಯ ಮಂದಿರದಿ—ಓ, ಎನ್ನ ದೇವಿ ಕಲ್ಪನಾ,

ತುಂಬಿ ಹರಿಸೆನ್ನ ನರನಾಡಿಗಳಲಿ ನಿನ್ನ ಬಲುಮೆಯನು—ಓ ಎನ್ನ ಶಕ್ತಿ ಕಲ್ಪನಾ.

ನನ್ನ ಬಾಳ ಪಥವನು ಬೆಳಗಿ ನಡೆಸೆನ್ನ ಹೆಜ್ಜೆಯನು, ಮಿಂಚಿ—ಓ ಎನ್ನ ಕಾಂತಿ ಕಲ್ಪನಾ,

ನಿನ್ನ ಎದೆವಾಲ ಕುಡಿದು ಬೆಳೆಯಲು, ಹಸಿದು ಕಾದಿಹ ಎನ್ನ ನೂರೆಂಟು ಕೃತಿಗಳಿಗೆ ಮರಳಿ ತಾಯಾಗು—ಬಾ ಎನ್ನ ಮಡದಿ ಕಲ್ಪನಾ"—

—ಎಂದು ಬೇಡುತ ನಾನವಳ ನೋಡುತಿರೆಯಿರೆ, ಅಂತೆಯೇ ಮಂಜಾಗಿ ಕರಗಿ ಮಾಯವಾದಳು—ನನ್ನ ಕಲ್ಪನಾ.

ದಿಕ್ಕೆಟ್ಟು ವಿಸ್ಮಯದಿ ಅತ್ತಿತ್ತ ನೋಡುತ್ತ, ಅವಳನರಸತೊಡಗಿದೆ ಕೂಗಿ-ಕೂಗಿ:

"ಓ, ಕಲ್ಪನಾ, ಬಾ, ಕಲ್ಪನಾ; ಎಲ್ಲಿರುವೆ ಹೇಳೆನ್ನ ಕಲ್ಪನಾ!" —ಎಂದು.

ಅಲ್ಲೊಮ್ಮೆ ಇಲ್ಲೊಮ್ಮೆ ನೀಲಿದಳಗಳ ಮರೆಯಿಂದ,

"ಇಲ್ಲಿಹೆನು!—ಇದೊ ಇಲ್ಲಿಹೆನು!—ಇಲ್ಲೆ ಇಹೆನೈ!"—ಎಂದು

ತ್ರರವನೀಯುತ್ತ ಕಾಡಿಸಿ ಕಾಡಿಸಿ—ಆಡಿಸತೊಡಗಿದಳೆನ್ನ ಕಲ್ಪನಾ.

ಅವಳ ದನಿಜೇನಿಗೆ ಭ್ರಮಿಸಿ ಬಂಡುಣಿಯಾಗಿ ಬೆಂಬತ್ತಿ ಬೇಟೆಯಲಿ ಬಸವಳಿದು ಬಾಯಾರಿಬರೆ, ಉಸಿರಡಗಿ ತಲೆತಿರುಗಿ ಬಿದ್ದೆ :

“ ಹಾ ! ನನ್ನ ಕಲ್ಪನಾ !”—ಎಂದು ಚೀತ್ಕರಿಸಿ.

* * * *

ಯಾರೋ ನನ್ನ ಮೈ ಹಿಡಿದು ಕುಲುಕಿದಂತಾಯ್ತು ; ಕಣ್ಬಿಟ್ಟು ನೋಡೆ—ನನ್ನ ಕುಸುಮಾ.

“ ಏಳಿ, ಏಳಿ!—ಎಚ್ಚರಗೊಳಿ ! ಏನು ಸವಿಗನಸ ಕಾಣುತಿದ್ದಿರಿ? ಯಾರನೋ ಕೂಗುತಿದ್ದಿರಿ—ಯಾರನು ?”—ಎಂದು ಕೇಳಿದಳು ನನ್ನ ಹಣೆಯ ಸವರುತ್ತ.

“ನಿನಗವಳು ಗೊತ್ತು”—ಎಂದೆ ನಸುನಗುತ ಗಾಂಭೀರ್ಯದಲಿ.

“ ಅವಳೇ ?—ಅವಳು !—ಯಾರವಳು ?—ನನಗೆ ಗೊತ್ತಾದವಳು ?—ಹೇಳಿ, ಹೇಳಿ ! ”—ಎಂದೆನ್ನ ಮೈಕುಲುಕಿದಳು ಮತ್ತೊಮ್ಮೆ.

“ ನನ್ನ ಬಳಿಯಲವಳ ಕಂಡು ನೀನೆನಿತೊ ಬಾರಿ ಕೆರಳಿ ಕನಲಿ ಅಟ್ಟಿರುವೆಯವಳ ! ”

“ ನಿಮ್ಮಬಳಿ ?—ಅವಳು ! ಯಾರೋ ?—ಬಲು ಧೈರ್ಯಗಾತಿ ! ಹೋಗಿ ! ನಿಮ್ಮ ಮಾತೆಲ್ಲ ಪೊಳ್ಳು ! ಬರಿ ಸುಳ್ಳು !”—ಎಂದು ತಿವಿದು ತಳ್ಳಿದಳೆನ್ನಾಕೆ ತಾಳ್ಮೆ ತಪ್ಪಿ”.

“ ಸುಳ್ಳಲ್ಲ, ಸುಳ್ಳಲ್ಲ, ಓ ಎನ್ನ ಬಾಳ್ಕುಸುಮ, ನಿನ್ನ ನನ್ನ ಬಾಳ ಸಂಗಮಕು ಮೊದಲೆ ಮೂಡಿ ನರ್ತಿಸತೊಡಗಿದ್ದಳೆನ್ನೆದೆಯ ರಂಗದಲಿ.

“ ಹೆಸರೋ ?”

“ ಕಲ್ಪನಾ ಕಾಮಿನಿ ”

“ ಓ————! ಮನಸಿನ ಮಂಡಿಗೆ!! ತಿನ್ನಿ, ತಿನ್ನಿ !”—ಎಂದು ಪರಿಹಾಸ್ಯಗೈದಳೆನ್ನ ಕುಸುಮ—ಸವತಿಯ ಹೆಸರ ಕೇಳಿ.

# ಪ್ರಶ್ನೆ—ಉತ್ತರ

ಒಂದು ದಿನ—

ಕುಟೀರದಲಿ ಮಲಗಿ ಮನದಲೇ ಮೆಲುಕುತಿದ್ದೆ, ಪ್ರೇಮ-ಕಾಮಗಳ ಪರಿಯನು ಕುರಿತು. ಹೊತ್ತು ಹೋದಂತೆಲ್ಲ ಹೆಚ್ಚುತ್ತ ಬಂದಿತ್ತು ಪ್ರಶ್ನೆಯ ತೊಡಕು. ಕಡೆಯಲಿ ದಾರಿಗಾಣದೆ ಕಿಟಕಿಯನುಸಾರಿ-

"ಓ, ಗೆಳೆಯ"—

—ಎಂದೆ, ಮನದಲೇ ನೆನೆದು, ಹೆಸರಿಲ್ಲದಾ ಗಗನವಿಹಾರಿಯ ಸಂಗವನು ಬಯಸಿ.

ಒಡನೆಯೇ ಹಾರಿ ಬಂದಿತು ಹಕ್ಕಿ ಎಲ್ಲಿಂದಲೋ, ತಾನಿತ್ತ ವಚನವನು ಪಾಲಿಸಿ. ಕಿಟಕಿಯಂಚಿನಲಿ ಕುಳಿತು ಕೇಳಿತು,

—"ನನ್ನ ನೆನೆದುದೇಕೆ—ಮಿತ್ರಾ?"—

—ಎಂದು.

"ಹೆಣ್ಣು- ಗಂಡುಗಳ ಬಾಳಿನಲಿ ಪ್ರೇಮ-ಕಾಮಗಳ ರೀತಿಯನು ಕುರಿತು ಚಿಂತಿಸುತಿದ್ದೆ—ಗೆಳೆಯ. ಬಗೆಹರಿಯದಿರೆ—ನಿನ್ನ ನೆನಪಾಯ್ತು. ಹೇಳು, ಇದಕುತ್ತರವ ನೀ ಬಲ್ಲೆಯಾದರೆ"—

ನಕ್ಕು ಹೇಳಿತು ಹಕ್ಕಿ—

—"ಆಹಾ!—ಮಿತ್ರಾ, ಉತ್ತರದ ಅಂಚಿನಲೇ ನಿರುತವೂ ಇರುತ ದಾರಿಗಾಣದಾದೆಯಾ?—"

—ಎಂದು, ಒಗಟೆಯೊಂದನು ಹೂಡಿ.

"ಅಂಚೊ-ಗಿಂಚೊ! ಏನೊ ಕಾಣೆ ಗೆಳೆಯ, ನೀನೆ ಒಡೆಯಬೇಕು ನಿನ್ನೀಒಗಟೆಯ ಮೊಟ್ಟೆಯ"—ಎಂದೆ.

"ಅದೊ ನೋಡು—ಬಿತ್ತರಿಸಿದೆ—ತೀರಗೀರಗಳಿಲ್ಲದ ಮಹಾಸಾಗರ—ದಿವ್ಯ ಗಾಂಭೀರ್ಯದಲಿ.

ಅದರ ಮೇಲು ಮೈಯ್ಯ ಭವ್ಯಬಿತ್ತರದಂತೆ—ಕಣ್ಗೆ ವ್ಯಕ್ತ—ನರನಾರಿಯರ ಗಂಭೀರ ಪ್ರೇಮ.

ಬಡಬಾಗ್ನಿ—ರತುನಗಳಿಗಾಸರೆಯಾದದರ ಅಗೋಚರ ಗಭೀರತೆಯಂತೆ—ಗುಪ್ತ, ಹೆಣ್ಣು ಗಂಡುಗಳ ತಪ್ತ ಕಾಮ"

—ಎಂದು ಒಗಟೆಯನು ಒಡೆದೋಡಿತು ಹಾರಿ—ನನ್ನ ಮುದ್ದು ಗಗನ ವಿಹಾರಿ.

# ಮುತ್ತಿನ ಮಿಂಚು

ಎಂತು—

—ಮುಂಗಾರ್ಗಾಲದಲಿ ಗಗನವನೆ ಆವರಿಸಿ, ವರ್ಷಗರ್ಭಿತ ಕಾರ್ಮೋಡಗಳೆರಡು ಸಾರುತಿರಲೊಂದನೊಂದು—ಸಂಗಮಿಸಲು—

—ಅಹೋ! ಇದ್ದಕಿದ್ದಂತೆ ಫಳ್ಳೆಂದು ಹೊಳೆದೊಂದು ಸೆಳೆ ಮಿಂಚು, ಭೂ-ಗಗನತಲಗಳನು ಬೆಳಗಿ—ಆರ್ಭಟಿಸಿ ದಿಕ್ತಟಗಳಿಂದ ಮಾರ್ದನಿಯುರುಳುರುಳಿ ಬರುವಂತೆ—ಮೊಳಗಿ ಮೊಳಗಿ—

—ಒಂದರಲೊಂದೈಕ್ಯವಾಗುವುವೋ

ಮುಗಿಲೆರಡು ಒಂದಾಗಿ—

ಅಂತು—

—ತುಂಬಿದಾಸೆಯಿಂದೊಡಲುಗಳು ಬಿರಿಯುತಿರೆ, ಕಾತರದಿ ಹೊಂಚಿಕೂಡುವ ತೃಷಾಪೂರ್ಣ ಪ್ರಣಯಿಗಳ ಕ್ಷಣಿಕ ಅಧರ ಸಮ್ಮೇಳನದಿ, ಬಿಸಿ ಮುತ್ತೊಂದು ಕಳುವಾಗುವ ಪ್ರಸಂಗ.

# ಅರಿತಿಹೆನು ! - - ಅರಿತಿಹೆನು !!

ಅರಿತಿಹೆನು—

—ಓ ಎನ್ನ ಮನದನ್ನೆ, ಬರಬರುತ ಒಂದು ದಿನ, ಬರಿದಾಗುವುದು ನಿನ್ನೀ ಅತುಳಾನುಪಮರೂಪಭಂಡಾರದೈಸಿರಿಯು—ಎಂಬುದನು ಅರಿತಿಹೆನು—ರನ್ನೆ.

ಒಂದುದಿನ—

—ಓ ಎನ್ನ ಕೀರವಾಣಿ, ನಿನ್ನ ಕೊರಳ ಮುರಳೀ ಮಂಜುಳ ಮಾಯೆ ಮಾಯವಾಗುವುದೆಂದು—

—ಓ ಎನ್ನ ಕನಕಾಂಗಿ, ನಿನ್ನ ಫಲಿತಕೇತಕಿಯ ವೈ ಬಣ್ಣ ಮಾಸುವುದು-ಎಂದು—

—ಓ ಎನ್ನ ಪದ್ಮಿನಿ, ನಿನ್ನ ಸಿರಿಯೊಡಲನರುಗಂಪು ಆರಿ ಹೋಗುವುದೆಂದು—

—ಓ ಎನ್ನ ಜೌವ್ವನೆ, ನಿನ್ನ ತನುರನ್ನಕಲಶವ ತುಂಬಿ ತುಳುಕುತಿಹ ಈ ಹೊಸ ಹರೆಯದಮೃತ ಗುರುತಿಲ್ಲದಂತಿಂಗಿಹೋಗುವುದೆಂದು—

—ಓ ಎನ್ನ ಕುಸುಮಕೋಮಲೆ, ಬಾಳ ಹಿಮಕಾಲದಿರುಳು ಸಾರಲು ನಿನ್ನ ಮೊಗಪದುಮಸೊರಗಿ ಸುಕ್ಕುವುದು—ಎಂದು

—ಓ ಎನ್ನ ಕಾಮಿನಿ, ಒಂದು ನೋಟಕೆ—ಅರ್ಧಸೋಂಕಿಗೆ ನಿನ್ನ ಧಮನಿಯ ರಕುತ ಬಿಸಿಯೇರಿ ಕುದಿಯೆ, ಉರಿಯೆದ್ದು ನರ್ತಿಸುವ ನಿನ್ನಮಲ ಕಾಮ ಉಡುಗಿ ಹೋಗುವುದೆಂದು—

ಅರಿತಿಹೆನು- ಓ ಎನ್ನ ಚಂದ್ರಮೋಹನೆ—

ಆದರೆಲೆ ದೇವಿ, ಅತುಲನೇಹದಿಂ ತುಂಬಿರುವ ನಿನ್ನೆದೆಯಲೆನಗಾಗಿ ಬೆಳಗುತಿಹ ವಿಮಲ ಪ್ರೇಮದ ರನ್ನದೀವಿಗೆ ಅಕ್ಷಯವೆಂದು-ಅಮರವೆಂದು—

—ಅರಿತಿಹೆನು !—ಅರಿತಿಹೆನು !!

| | ಸಾದಾ ಪ್ರತಿ | |
|---|---|---|
| **ಪು. ತಿ. ನರಸಿಂಹಾಚಾರ್—** | ರೂ. | ಆ. |
| ಶಾರದಯಾಕುನಿ (ಕವನಗಳು) .... .... .... | ೧ | ೦ |
| ಗೋಕುಲನಿರ್ಗಮನ (ಗೀತರೂಪಕ) .... .... | ೧ | ೦ |
| ಶಬರಿ (ಗೀತರೂಪಕ) .... .... .... | ೦ | ೮ |
| ಗಣೇಶದರ್ಶನ (ಕವನಸಂಗ್ರಹ) .... .... .... | ೧ | ೮ |
| ಮಾಂದಳಿರು ( ,, ) .... .... .... | ೧ | ೪ |
| **ಆನಂದ—** | | |
| ಸ್ವಪ್ನಜೀವಿ ಮತ್ತು ಇತರ ಕಥೆಗಳು .... .... .... | ೧ | ೦ |
| ಮಾಟಗಾತಿ (ಕಥೆಗಳು) .... .... .... | ೧ | ೪ |
| ದಹನಚಿತ್ರ (ನಾಟಕ) .... .... .... .... | ೦ | ೮ |
| ಪಕ್ಷಿಗಾನ (ವಚನ ಚಿತ್ರಗಳು) .... .... .... | ೧ | ೪ |
| **ಗೊರೂರು ರಾಮಸ್ವಾಮಿ ಐಯಂಗಾರ್—** | | |
| ಹಳ್ಳಿಯ ಬಾಳು (ಗದ್ಯಚಿತ್ರಗಳು) .... .... .... | .... | |
| ಬೆಸ್ತರ ಕರಿಯು (ಗದ್ಯಚಿತ್ರಗಳು) .... .... .... | ೨ | ೪ |
| ಶಿವರಾತ್ರಿ (ಗದ್ಯಚಿತ್ರಗಳು) .... .... .... | ೨ | ೪ |
| **ತೀ. ನಂ. ಶ್ರೀಕಂಠಯ್ಯ—** | | |
| ರಾಕ್ಷಸನ ಮುದ್ರಿಕೆ (ನಾಟಕ) .... .... .... | ೧ | ೦ |
| ಹರಿಹರ ಕವಿಯ ನಂಬಿಯಣ್ಣನ ರಗಳೆ (ಮೂಲ ಮತ್ತು ಪಾಠಾಂತರಗಳು) .... .... .... | ೨ | ೦ |
| **ಎಸ್. ವಿ. ರಂಗಣ್ಣ—** | | |
| ಶೈಲಿ (ಶೈಲಿಯ ಸ್ವರೂಪ—ಪಂಪನ ಶೈಲಿ—ರನ್ನನ ಶೈಲಿ—ರಾಘವಾಂಕನ ಶೈಲಿ—ಕುಮಾರವ್ಯಾಸನ ಶೈಲಿ) .... | ೨ | ೦ |
| **ಎ. ಎನ್. ಮೂರ್ತಿರಾವ್—** | | |
| ಆಷಾಢಭೂತಿ (ನಾಟಕ) .... .... .... | ೧ | ೦ |
| ಹಗಲುಗನಸುಗಳು (ಪ್ರಬಂಧಗಳು) .... .... .... | ೧ | ೪ |
| ಹವಳದ ದ್ವೀಪ .... .... .... | .... | |
| **ಸಿ. ಕೃಷ್ಣ —** | | |
| ನನ್ನ ಅಪ್ಸರೆ (ಶೃಂಗಾರ ವಚನಗಳು) .... | ೦ | ೬ |
| ಮುಗುವೆಯರ ಪತ್ರಗಳು (ಪತ್ರ ಕಥೆಗಳು) .... | [illegible] | ೮ |
| ಗೌರಿಯ ಮದುವೆ .... .... .... | ೧ | [illegible] |

---